KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಆಗಸ್ಟ್ ೧೪, ೨೦೦೮ (ಶ್ರಾವಣ ೨೩, ಶಕ ವರ್ಷ ೧೯೩೦) | ಸಂಚಿಕೆ ೩೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಗದಗ್ ಜಿಲ್ಲಾಪಂಚಾಯತ್ ಹಾಗೂ ಅಪೆರಲ್ ಪ್ರಮೋಶನ್ ಕೌನ್ಸಿಲ್ ಗುರಗಾಂವ್ ಇವರ ಸಹಯೋಗದೊಂದಿಗೆ ಸಿದ್ಧ ಉಡುಪು ತರಬೇತಿ ಕೇಂದ್ರವನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ರವರ ಪತ್ರದ ಸಂ. ಜಿಪಂಗ/ಎಸ್‌ಜಿಎಸ್‌ವೆವಹಿ 41/2007–08 ದಿನಾಂಕ:15.3.2008.

**ಪ್ರಸ್ತಾವನೆ:**

ಕೃಷಿ ನಂತರ ಹೆಚ್ಚಿನ ಉದ್ಯೋಗ ಒದಗಿಸುವ ಕ್ಷೇತ್ರ ಜವಳಿ ವಲಯವಾಗಿರುತ್ತದೆ. ಸಿದ್ಧ ಉಡುಪು ಕೈಗಾರಿಕೆಗಳು ಬೆಂಗಳೂರಿನಲ್ಲಿ ಮಾತ್ರ ಕೇಂದ್ರೀಕೃತವಾಗಿದ್ದು, ಉಳಿದ ಜಿಲ್ಲೆಗಳಲ್ಲಿ ಸಿದ್ಧ ಉಡುಪು ತಯಾರಿಕೆಯಲ್ಲಿ ನುರಿತ ಕೆಲಸಗಾರರು ಸಿಗದ ಪ್ರಯುಕ್ತ ಸಿದ್ಧ ಉಡುಪು ಘಟಕಗಳು ವಿವಿಧ ಜಿಲ್ಲೆಗಳಲ್ಲಿ ಸ್ಥಾಪನೆಯಾಗುತ್ತಿಲ್ಲ. ವಿವಿಧ ಜಿಲ್ಲೆಗಳಲ್ಲಿ ಸಿದ್ಧ ಉಡುಪು ಘಟಕಕ್ಕೆ ಅವಶ್ಯವಿರುವ ನುರಿತ ಕೆಲಸಗಾರರನ್ನು ತಯಾರು ಮಾಡುವುದು ಹಾಗೂ ಜಿಲ್ಲೆಯಲ್ಲಿ ಸಿದ್ದ ಉಡುಪು ಉದ್ಯಮಕ್ಕೆ ಬೇಡಿಕೆ ಸೃಷ್ಟಿಸುವುದು ಅವಶ್ಯವಿರುತ್ತದೆ ಹಾಗೂ ಎಸ್‌ಜಿಎಸ್‌ವೈ ಯೋಜನೆಯಲ್ಲಿ ಸ್ವ ಉದ್ಯೋಗ ಹಾಗೂ ಉದ್ಯೋಗ ಸೃಷ್ಟಿಸುವುದು ಅವಶ್ಯವಿರುತ್ತದೆ. ಸಾರ್ವಜನಿಕ ಕ್ಷೇತ್ರದಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸುವ ಸ್ವಯಂ ಸೇವಾ ಸಂಸ್ಥೆ ಜೊತೆ ತರಬೇತಿಯು ಪ್ರಾರಂಭಿಸುವ ಉದ್ದೇಶ ರಾಜ್ಯ ಸರ್ಕಾರ ಹೊಂದಿರುತ್ತದೆ. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಹಾಗೂ ಅಪೆರಲ್ ಪ್ರಮೋಶನ್ ಕೌನ್ಸಿಲ್, ಗುರಗಾಂವ್ ಹಾಗೂ ಗದಗ್ ಜಿಲ್ಲೆಯಲ್ಲಿ ಅಗ್ರಿಕಲ್ಚರ್ ಸೈನ್ಸ್ ಫೌಂಡೇಶನ್ ಸಂಸ್ಥೆ ಯವರ ಕೆವಿಕೆ ಹುಲಕೋಟಿಯ ಆವರಣದಲ್ಲಿ ಸುಮಾರು 4000 ಚ.ಅ. ಸುಸಜ್ಜಿತ ಕಟ್ಟಡದಲ್ಲಿ ಎಟಿಡಿಸಿ ಸ್ಥಾಪಿಸುವ ಬಗ್ಗೆ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನ ತೆಗೆದುಕೊಂಡು ಪ್ರಸ್ತಾವನೆಗೆ ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಗದಗ್ ಜಿಲ್ಲೆಯಲ್ಲಿ ಅಪೆರಲ್ ಪ್ರಮೋಶನ್ ಕೌನ್ಸಿಲ್, ಗುರಗಾಂವ್ ಇವರ ಸಹಯೋಗದೊಂದಿಗೆ ಸಿದ್ಧ ಉಡುಪು ತರಬೇತಿ ಕೇಂದ್ರವನ್ನು ಸ್ಥಾಪಿಸಬೇಕಾಗಿದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ.21. ಎಸ್‌ಜಿವೈ (ಇ) 2008 ಬೆಂಗಳೂರು, ದಿನಾಂಕ:9ನೇ ಏಪ್ರಿಲ್ 2008**

ರಾಜ್ಯ ಸರ್ಕಾರ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಗದಗ್ ಜಿಲ್ಲೆಯಲ್ಲಿ ಜಿಲ್ಲಾ ಪಂಚಾಯತ್ ಹಾಗೂ ಅಪೆರಲ್ ಪ್ರಮೋಶನ್ ಕೌನ್ಸಿಲ್ ಗುರಗಾಂವ್ ಇವರ ಸಹಯೋಗದೊಂದಿಗೆ ಸಿದ್ದ ಉಡುಪು ತರಬೇತಿ ಕೇಂದ್ರವನ್ನು ಈ ಕೆಳಗೆ ಕಾಣಿಸಿದ ಷರತ್ತುಗಳೊಂದಿಗೆ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು:**

1. ಸಿದ್ದ ಉಡುಪು ತರಬೇತಿ ಕೇಂದ್ರಕ್ಕೆ ಭೂಮಿ ಮತ್ತು ಕಟ್ಟಡ ಅನುದಾನ ನೀಡಲು ಅವಕಾಶವಿರುವುದಿಲ್ಲ.

2. ಸಿದ್ದ ಉಡುಪು ಮತ್ತು ತರಬೇತಿ ಕೇಂದ್ರವನ್ನು ಕನಿಷ್ಠ 10 ವರ್ಷ ಕಡ್ಡಾಯವಾಗಿ ನಡೆಸಬೇಕು.

3. ಸ್ವಯಂ ಸೇವಾ ಸಂಸ್ಥೆಯ ಸ್ವಂತ ಕಟ್ಟಡಕ್ಕೆ ಬಾಡಿಗೆಯನ್ನು ಹಾಕತಕ್ಕದ್ದಲ್ಲ.

4. ಪ್ರತ್ಯೇಕವಾಗಿ ಪುರುಷರಿಗೆ ಮತ್ತು ಮಹಿಳೆಯರಿಗೆ ಶೌಚಾಲಯ ಮತ್ತು ನೀರಿನ ವ್ಯವಸ್ಥೆ ಒದಗಿಸುವುದು.

5. ತರಬೇತಿ ಕೇಂದ್ರಕ್ಕೆ 4000 ಚದರ ಅಡಿ x 20 ಕೆವಿಎ ವಿದ್ಯುಚ್ಛಕ್ತಿ ನೀರಿನ ವ್ಯವಸ್ಥೆ ಮತ್ತು ಶೌಚಾಲಯ ಸೌಲಭ್ಯ ಒದಗಿಸುವುದು.

6. ಎಸ್‌ಜಿಎಸ್‌ವೈ ಯೋಜನೆಯ ಮೂಲಭೂತ ಸೌಕರ್ಯದಡಿ ಯಂತ್ರೋಪಕರಣವನ್ನು ನೀಡಲಾಗುತ್ತಿದ್ದು ಸಂಸ್ಥೆಯವರು ಅನಿವಾರ್ಯ ಕಾರಣದಿಂದ ತರಬೇತಿ ಕೇಂದ್ರವನ್ನು ಸ್ಥಗಿತಗೊಳಿಸಿದರೆ ಯಂತ್ರೋಪಕರಣವನ್ನು ಬೇರೆ ಕೇಂದ್ರಕ್ಕೆ ವರ್ಗಾಯಿಸುವ ಅಥವಾ ಸದರಿ ಸಂಸ್ಥೆಯ ಕಟ್ಟಡದಲ್ಲಿಯೇ ಬಾಡಿಗೆಯ ಆಧಾರದ ಮೇಲೆ ನಡೆಸುವ ಅಧಿಕಾರ ಜಿಲ್ಲಾ ಪಂಚಾಯತಿಗಿರುತ್ತದೆ. ಇದರ ಬಗ್ಗೆ ಜಿಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆ ಹಾಗೂ ಎಟಿಡಿಸಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

7. ತರಬೇತಿ ಅವಧಿಯಲ್ಲಿ ಎಸ್‌ಜಿಎಸ್‌ವೈ ಯೋಜನೆಯಿಂದ ಶಿಷ್ಯವೇತನ ನೀಡಲು ಅವಕಾಶವಿರುವುದಿಲ್ಲ.

8. ಸದರಿ ತರಬೇತಿ ಕೇಂದ್ರದಲ್ಲಿ ಡಾ: ಅಂಬೇಡ್ಕರ್ ಅಭಿವೃದ್ಧಿ ನಿಗಮ, ಡಿ. ದೇವರಾಜ ಅರಸ್ ಅಭಿವೃದ್ಧಿ ನಿಗಮ, ಕೈಮಗ್ಗ ಮತ್ತು ಜವಳಿ ಇಲಾಖೆ, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯ ಫಲಾನುಭವಿಗಳು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಫಲಾನುಭವಿಗಳು ಹಾಗೂ ಇತರೆ ಇಲಾಖೆಯ ಯೋಜನೆಗಳಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ತರಬೇತಿ ನೀಡುವುದು. ತರಬೇತಿ ಅವಧಿಯನ್ನು ಹಾಗೂ ತರಬೇತಿಯ course fee ಯನ್ನು (ಎಸ್‌ಜಿಎಸ್‌ವೈ ಹೊರತುಪಡಿಸಿ) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಜೊತೆ ಸೇರಿ ನಿರ್ಧರಿಸುವುದು.

9. ಯಂತ್ರೋಪಕರಣ ಮತ್ತು ಪೀಠೋಪಕರಣ ಎರಡು ಸೇರಿಸಿ ಖರೀದಿಗೆ ಗರಿಷ್ಠ ರೂ. 25.00 ಲಕ್ಷ ನಿಗದಿಪಡಿಸಿದೆ. ಅದಕ್ಕಿಂತ ಕಡಿಮೆ ನೈಜ ವೆಚ್ಚವಾಗಿದ್ದರೆ, ನೈಜ ವೆಚ್ಚವನ್ನು ಮಾತ್ರ ಪಾವತಿಸುವುದು.

10. ಯಂತ್ರೋಪಕರಣ ಖರೀದಿಯಲ್ಲಿ ಪಾರದರ್ಶಕ ಕಾಯಿದೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವುದು

11. ಸಂಸ್ಥೆಗೆ ಬೇಕಾದ ಸಿಬ್ಬಂದಿಯನ್ನು ತಾಂತ್ರಿಕ ನೈಪುಣ್ಯತೆಯ ಆಧಾರದ ಮೇಲೆ ನೇಮಿಸುವ ಜವಾಬ್ದಾರಿ ಎಟಿಡಿಸಿ ಯದಾಗಿರುತ್ತದೆ.

12. ಪ್ರತಿ ತಿಂಗಳು ಕನಿಷ್ಠ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವುದು

13. ತರಬೇತಿ ಪಡೆದ ಅಭ್ಯರ್ಥಿಗಳು ಸ್ವ ಉದ್ಯೋಗ/ಸಿದ್ಧ ಉಡುಪು ತಯಾರಿಕಾ ಘಟಕಗಳಲ್ಲಿ ಕೆಲಸ ಕೊಡಿಸುವ ಜವಾಬ್ದಾರಿ ಎಟಿಡಿಸಿ ಯದಾಗಿರುತ್ತದೆ.

14. ಈ ಕೇಂದ್ರಕ್ಕೆ ತಗಲುವ ಆವರ್ತಕ ವೆಚ್ಚವನ್ನು ಎಸ್‌ಜಿಎಸ್‌ವೈ ಯೋಜನೆಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ತರಬೇತಿ ನೀಡಿ ತರಬೇತಿ ಪಡೆದ ಪ್ರತಿ ಅಭ್ಯರ್ಥಿಗೆ ಪ್ರತಿ ತಿಂಗಳಿಗೆ ರೂ. 1500–00 ರಂತೆ ಎಟಿಡಿಸಿಗೆ ಪಾವತಿಸುವ ಮೂಲಕ ಆವರ್ತಕ ವೆಚ್ಚಭರಿಸುವುದು.

15. ಜಿಲ್ಲಾ ಮಟ್ಟದಲ್ಲಿ ಉಸ್ತುವಾರಿ ಸಮಿತಿಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರ ಅಧ್ಯಕ್ಷತೆಯಲ್ಲಿ ರಚನೆ ಮಾಡಲಾಗಿದೆ. ಈ ಸಮಿತಿಯು ಪ್ರತಿ ತಿಂಗಳು ಸಭೆ ನಡೆಸುವುದು.

16. ಯಂತ್ರೋಪಕರಣ ಮತ್ತು ಪೀಠೋಪಕರಣಗಳ ವೆಚ್ಚವನ್ನು ಎಸ್‌ಜಿಎಸ್‌ವೈ ಯೋಜನೆಯ ಮೂಲಭೂತ ಸೌಕರ್ಯ ನಿಧಿಯಿಂದ ಭರಿಸುವುದು. ಈ ಯಂತ್ರೋಪಕರಣಗಳು ಜಿಲ್ಲಾ ಪಂಚಾಯಿತಿ ಆಸ್ತಿಯಾಗಿದ್ದು ರಿಜಿಸ್ಟರ್‌ನಲ್ಲಿ ದಾಖಲೆ ಮಾಡುವುದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ಪಿ.ಆರ್. 653

**ನಿರ್ದೇಶಕರು**

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ ಹಾಗೂ
ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ
ಮತ್ತು ಪಂಚಾಯತ್ ರಾಜ್ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಆರ್.ಕೆ. ಹಿಟ್ಟಿನ ಮಠ, ಮುಜರಾಯಿ ಸಹಾಯಕರು ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿಗಳ ನೇಮಕಾತಿ ಬಗ್ಗೆ–ಆದೇಶ

**ಓದಲಾಗಿದೆ:** 1. ದಿನಾಂಕ: 4–9–2007 ಸಂಖ್ಯೆ: ಸಿಬ್ಬಂದಿ 3 ಸಿಆರ್ 30/2006–07ರ ಧಾರ್ಮಿಕ ದತ್ತಿ ಆಯುಕ್ತರ ಪತ್ರ..

2 ಶ್ರೀ ಆರ್.ಕೆ. ಹಿಟ್ಟಿನಮಠರವರಿಗೆ ದೋಷಾರೋಪಣ ಪಟ್ಟಿಯೊಂದಿಗೆ ಜಾರಿಯಾದ ಕಾರಣ ಕೇಳುವ ನೋಟೀಸ್ ಸಂಖ್ಯೆ:ಕಂಇ 229 ಮುಸೇವಿ 2007 ದಿನಾಂಕ:23.11.2007

3 ಆಪಾದಿತರ ರಕ್ಷಣಾ ಹೇಳಿಕೆ ದಿನಾಂಕ:1–12–2007

4 ದಿನಾಂಕ:10–1–2008 ಸಂಖ್ಯೆ:ಕಂಇ 229 ಮುಸೇವಿ 2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರದಲ್ಲಿ ಶ್ರೀ ಆರ್.ಕೆ. ಹಿಟ್ಟಿನಮಠ, ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರು ತೀರ್ಥಹಳ್ಳಿ ತಾಲ್ಲೂಕು, ಹಣಗೆರೆಕಟ್ಟೆಯ ಶ್ರೀ ಭೂತರಾಯ ಚೌಡೇಶ್ವರಿ ದೇವಾಲಯ, ದರ್ಗಾದಲ್ಲಿ ಹುಂಡಿ ಏಣಿಕೆ ಸಮಯದಲ್ಲಿ ಅನಧಿಕೃತವಾಗಿ ಹುಂಡಿ ಹಣವನ್ನು ತೆಗೆದುಕೊಂಡಿರುವುದಾಗಿ ಜಿಲ್ಲಾಧಿಕಾರಿ, ಶಿವಮೊಗ್ಗರವರ ವರದಿಯನ್ವಯ ಇವರನ್ನು ಅಮಾನತ್ತುಗೊಳಿಸಲಾಗಿರುತ್ತದೆ. ಶ್ರೀ ಆರ್.ಕೆ. ಹಿಟ್ಟಿನಮಠರವರು ಸಮೂಹ–ಬಿ ಅಧಿಕಾರಿಗಳಾಗಿರುವುದರಿಂದ ಇವರ ವಿರುದ್ಧ ಆರೋಪಗಳ ಬಗ್ಗೆ ಇಲಾಖೆ ವಿಚಾರಣೆ ಕೈಗೊಳ್ಳಲು ದೋಷಾರೋಪಣ ಪಟ್ಟಿ ತಯಾರಿಸಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಶ್ರೀ ಆರ್.ಕೆ. ಹಿಟ್ಟಿನಮಠ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿ ಶಿಸ್ತು ಕ್ರಮ ಕೈಗೊಳ್ಳಲು ತೀರ್ಮಾನಿಸಿ ಆರೋಪಿತ ಅಧಿಕಾರಿಗೆ ದೋಷಾರೋಪಣ ಪಟ್ಟಿಗಳನ್ನು ಮೇಲೆ ಪ್ರತಿವಾದದ ಹೇಳಿಕೆಯನ್ನು ಸಲ್ಲಿಸಲು ಕಾರಣ ಕೇಳುವ ನೋಟೀಸ್ ನೊಂದಿಗೆ ಜಾರಿ ಮಾಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಶ್ರೀ ಆರ್.ಕೆ. ಹಿಟ್ಟಿನಮಠರವರ ಆರೋಪಿತ ಅಧಿಕಾರಿಯು ದಿನಾಂಕ:1–12–2007ರಂದು ರಕ್ಷಣಾ ಹೇಳಿಕೆ ನೀಡಿ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದರೆ ಸದರಿ ನಿರಾಕರಣೆಗೆ ಯಾವುದೇ ಸಮರ್ಥನೀಯ ದಾಖಲೆಗಳನ್ನು ಒದಗಿಸಿರುವುದಿಲ್ಲ. ಈ ಬಗ್ಗೆ ಪರಿಶೀಲಿಸಿ ಸದರಿ ಅಪಾದಿತರನ್ನು ಅಮಾನತ್ತಿನಲ್ಲಿ ಮುಂದುವರೆಸುವ ಅಗತ್ಯವಿಲ್ಲವೆಂದು ಮನಗಂಡು ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು, ಅಮಾನತ್ತಿನಿಂದ ಬಿಡುಗಡೆ ಮಾಡಲು ಮೇಲೆ (4)ರ ಓದಲಾದ ಆದೇಶದಲ್ಲಿ ತೀರ್ಮಾನಿಸಿ ಆದೇಶ ಹೊರಡಿಸಲಾಗಿದೆ.

ಆದಕಾರಣ ಈ ಪ್ರಕರಣದ ಸತ್ಯಾಂಶ ತಿಳಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ–11ರ ವಿಧಿವಿಧಾನಗಳನ್ನನುಸರಿಸಿ ಶ್ರೀ ಆರ್.ಕೆ. ಹಿಟ್ಟಿನಮಠ, ಹಿಂದಿನ ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳು ಕಛೇರಿ,ಶಿವಮೊಗ್ಗ ಇವರ ಮೇಲಿನ ಸದರಿ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿದೆ. ಆದಕಾರಣ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 229 ಮುಸೇವಿ 2007, ಬೆಂಗಳೂರು, ದಿನಾಂಕ:8ನೇ ಏಪ್ರಿಲ್ 2008**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಆರ್.ಕೆ. ಹಿಟ್ಟಿನಮಠ, ಹಿಂದಿನ ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳು ಕಛೇರಿ, ಶಿವಮೊಗ್ಗ ಇವರ ವಿರುದ್ಧದ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ವಿಧಿವಿಧಾನದನ್ವಯ ವಿವರವಾದ ಇಲಾಖಾ ವಿಚಾರಣೆ ನಡೆಸಲು ಶ್ರೀ ಪಿ.ಸಿ. ದಯಾಪರಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ಸದರಿ ನಿಯಮಗಳ ನಿಯಮ–11(2)ರಂತೆ ವಿಚಾರಣಾಧಿಕಾರಿಗಳನ್ನಾಗಿಯೂ ಹಾಗೂ ಈ ಪ್ರಕರಣದ ಶಿಸ್ತು ಪ್ರಾಧಿಕಾರದ ಪರವಾಗಿ ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಸುಬ್ಬಮೂಲ್ಯ, ಕಛೇರಿ, ಸಹಾಯಕರು, ಧಾರ್ಮಿಕ ದತ್ತಿ ಇಲಾಖೆರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 19 ಸೇಇವಿ 2002 ದಿನಾಂಕ:28–6–2002ರಲ್ಲಿ ಸೂಚಿಸಿದಂತೆ ನಾಲ್ಕು ತಿಂಗಳೊಳಗಾಗಿ ಪೂರ್ಣಗೊಳಿಸಿ, ಸಂಬಂಧಿಸಿದ ಅಭಿಲೇಖನಗಳೊಂದಿಗೆ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ, ನಿಯಮಾನುಸಾರ ವಿಚಾರಣಾಧಿಕಾರಿಗಳಿಗೆ ಸಂಚಿತ ಸಂಭಾವನೆ ಹಾಗೂ ಪ್ರವಾಸ ಭತ್ಯೆಗಳನ್ನು ಮಂಜೂರು ಮಾಡಲಾಗುವುದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 654

**ಎಲ್.ಎಸ್ .ಶ್ರೀಕಂಠಬಾಬು**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ.ಎಫ್. ತಳವಾರ್ ನಿವೃತ್ತ ಕೆಎಎಸ್ ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ– ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ:25.6.2007ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 87 ಎಸ್ ಇಎನ್ 02

2 ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ: 1.2.2008ರ ವಿಚಾರಣಾ ವರದಿ

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಎಫ್. ತಳವಾರ, ಕೆಎಎಸ್ (ಕಿರಿಯ ಶ್ರೇಣಿ) ನಿವೃತ್ತ ಅಧಿಕಾರಿ ಇವರು ಚನ್ನಗಿರಿ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚನ್ನಗಿರಿ ತಾಲ್ಲೂಕು ಜಯಂತಿ ಗ್ರಾಮದ ಶ್ರೀ ರಾಜಪ್ಪ ಬಿನ್ ಹಾಲಪ್ಪ ಹಾಗೂ ಹಾಲಪ್ಪ ಬಿನ್ ರಾಮಪ್ಪ ಎಂಬುವವರಿಗೆ ಜಾತಿ ಪ್ರಮಾಣ ಪತ್ರ ನೀಡುವಾಗ ಅನುಸರಿಸಬೇಕಾದ ಕಾರ್ಯವಿಧಾನವನ್ನು ಪಾಲಿಸದೇ ಗ್ರಾಮ ಲೆಕ್ಕಿಗರು ನೀಡಿದ ವರದಿಯ ಆಧಾರದ ಸದರಿಯವರು ಹಿಂದುಳಿದ ಉಪ್ಪಾರ ಜಾತಿಗೆ ಸೇರಿದವರಾಗಿದ್ದರೂ ಪರಿಶಿಷ್ಟ ಪಂಗಡದ ನಾಯಕ ಜಾತಿ ಎಂದು ಪ್ರಮಾಣ ಪತ್ರ ನೀಡಿದ ಆರೋಪವನ್ನು ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಳಗಾಂ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು ದಾವಣಗೆರೆ ಜಿಲ್ಲೆ ರವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳಾದ ಪ್ರಾದೇಶಿಕ ಆಯುಕ್ತರು, ಬೆಳಗಾಂ ಇವರು ಆಪಾದನೆಯನ್ನು ಸಾಕ್ಷ್ಯಾಧಾರಗಳಿಂದ ರುಜುವಾತು ಪಡಿಸುವಲ್ಲಿ ಮಂಡನಾಧಿಕಾರಿಯವರು ವಿಫಲರಾಗಿರುತ್ತಾರೆಂದು ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಮತ್ತು ಮಂಡನಾಧಿಕಾರಿಯಾಗಿ ನೇಮಿಸಲ್ಪಟ್ಟ ತಹಶೀಲ್ದಾರ್ ಚನ್ನಗಿರಿ ತಾಲ್ಲೂಕು ರವರು ಆರೋಪ ಪಟ್ಟಿಯ ಅನುಬಂಧ–3 ರಲ್ಲಿನ ಸಾಕ್ಷಿ ಪಟ್ಟಿಯಲ್ಲಿ ಸಾಕ್ಷಿದಾರರಾಗಿಯೂ ಸಹ ಇರುವುದು ಸರ್ಕಾರದ ಗಮನಕ್ಕೆ ಬಂದಿರುವ ಹಿನ್ನಲೆಯಲ್ಲಿ ಮಂಡನಾಧಿಕಾರಿಯನ್ನು ಬದಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 023 ಕೆಇವಿ 07 ಬೆಂಗಳೂರು, ದಿನಾಂಕ:24ನೇ ಏಪ್ರಿಲ್ 2008**

ದಿನಾಂಕ:1–2–08ರ ವಿಚಾರಣಾ ವರದಿಯನ್ನು ಸರ್ಕಾರವು ತಿರಸ್ಕರಿಸುತ್ತಾ, ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11(5)(C) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು ದಾವಣಗೆರೆ ಜಿಲ್ಲೆ ಇವರ ಬದಲಿಗೆ ಉಪವಿಭಾಗಾಧಿಕಾರಿಗಳು. ದಾವಣಗೆರೆ ಉಪವಿಭಾಗ ದಾವಣಗೆರೆ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ ಹಾಗೂ ಪ್ರಕರಣವನ್ನು ವಿಚಾರಣಾಧಿಕಾರಿಯವರಿಗೆ ಮಂಡಿಸುವ ಹಂತದಿಂದ ವಿಚಾರಣೆಯನ್ನು ಪುನರ್ ಪ್ರಾರಂಭಿಸಿ ಆದಷ್ಟು ತ್ವರಿತವಾಗಿ ವರದಿ ಸಲ್ಲಿಸುವಂತೆ ಆದೇಶಿಸುತ್ತದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 700

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಎ ಮರೀಗೌಡ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ನ್ಯಾಯಾಂಗ ಬಂಧನದಲ್ಲಿದ್ದ ಅವಧಿಯಲ್ಲಿ ಅಮಾನತ್ತಿನಲ್ಲಿದ್ದರೆಂದು ಆದೇಶಿಸುವ ಬಗ್ಗೆ

**ಓದಲಾಗಿದೆ:** ಆರಕ್ಷಕ ನಿರೀಕ್ಷಕರು, ವಿಜಯನಗರ ಪೊಲೀಸ್ ಠಾಣೆ, ಮೈಸೂರು ನಗರ ಇವರ ದಿನಾಂಕ:4–3–2008 ರ ಪತ್ರ ಸಂಖ್ಯೆ :VNPS/CC/No. 118/08

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಎ ಮರೀಗೌಡ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಮೈಸೂರು ನಗರ ವಿಜಯನಗರ 1ನೇ ಹಂತದಲ್ಲಿರುವ ಮನೆ ನಂ HIG 89ರಲ್ಲಿ ಗೃಹ ನಿರ್ಮಾಣ ಕೈಗೊಳ್ಳಲು ಶ್ರೀ ಎಂ ಸ್ವಾಮಿಗೌಡ ಎಂಬುವವರಿಗೆ ಗುತ್ತಿಗೆ ನಿರ್ಮಾಣಕಾರ್ಯ ವಹಿಸಿದ್ದು ಶ್ರೀ ಎ ಮರಿಗೌಡ ರವರು ಗುತ್ತಿಗೆದಾರರಿಗೆ ಪಾವತಿಸಬೇಕಿದ್ದ ಬಾಕಿ ಮೊತ್ತದ ವಸೂಲಾತಿಗೆ ಸಂಬಂಧಿಸಿದಂತೆ, ಗುತ್ತಿಗೆದಾರರು ಮೈಸೂರು ನಗರದ ವಿಜಯನಗರ ಪೊಲೀಸ್ ಠಾಣೆಯಲ್ಲಿ ದೂರು

ದಾಖಲಿಸಿ ಸಕ್ಷಮ ನ್ಯಾಯಾಲಯದಿಂದ ಕಟ್ಟಡ ನಿರ್ಮಾಣ ಕಾರ್ಯಕ್ಕೆ ತಡೆಯಾಜ್ಞೆ ತಂದಿರುತ್ತಾರೆ. ಸದರಿ ಗೃಹ ನಿರ್ಮಾಣದ ಸ್ಥಳದಲ್ಲಿದ್ದ ಗುತ್ತಿಗೆದಾರರಿಗೆ ಸೇರಿದ ಸಾಗುವಾನಿ ಮರದ ಸಾಮಾನುಗಳನ್ನು ಶ್ರೀ ಎ. ಮರಿಗೌಡ ಮತ್ತು ಅವರ ಮಕ್ಕಳು ಟ್ರ್ಯಾಕ್ಟರ್ ನಲ್ಲಿ ಕದ್ದು ಸಾಗಿಸುತ್ತಿದ್ದು, ಇದನ್ನು ಪತ್ತೆಮಾಡಿಕೊಡುವಂತೆ ಗುತ್ತಿಗೆದಾರರು ನೀಡಿದ ದೂರನ್ನು ವಿಜಯನಗರ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:172/07 ರಲ್ಲಿ ಪ್ರಕರಣ ದಾಖಲಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಸಕ್ಷಮ ನ್ಯಾಯಾಲಯಕ್ಕೆ ಸಲ್ಲಿಸಿ, ಆರೋಪಿಗಳ ಪತ್ತೆಗೆ ಕ್ರಮ ಕೈಗೊಳ್ಳಲಾಗಿದೆ. ಈ ಸಂಬಂಧವಾಗಿ ಆರೋಪಿತ ಶ್ರೀ ಎ. ಮರೀಗೌಡ ಮತ್ತು ಅವರ ಮಕ್ಕಳಿಗೆ ಮೈಸೂರು ನಗರದ ಮಾನ್ಯ 2ನೇ ಅಡಿಷನಲ್ ಸೆಷನ್ಸ್ ನ್ಯಾಯಾಲಯವು ಮಂಜೂರು ಮಾಡಿದ್ದ ಜಾಮೀನಿನ ಷರತ್ತಿನಂತೆ ಆರೋಪಿತರು ತನಿಖೆಗೆ ಸಹಕರಿಸದಿದ್ದರಿಂದ ಮಾನ್ಯ ನ್ಯಾಯಾಲಯವು ಇವರುಗಳ ಜಾಮೀನು ಅರ್ಜಿಯನ್ನು ತಿರಸ್ಕರಿಸಿ ದಿನಾಂಕ:22–1–08 ರಿಂದ 4–2–2008 ರವರೆಗೆ ನ್ಯಾಯಾಂಗ ಬಂಧನಕ್ಕೆ ಆದೇಶಿಸಿರುತ್ತದೆಂದೂ ಅದರಂತೆ ಆರೋಪಿತರು ದಿನಾಂಕ:22–1–08 ರಿಂದ 29–1–08 ರವರೆಗೆ ನ್ಯಾಯಾಂಗ ಬಂಧನದಲ್ಲಿದ್ದು ನಂತರ ಮೈಸೂರಿನ 2ನೇ ಅಡಿಷನಲ್ ಸೆಷನ್ಸ್ ನ್ಯಾಯಾಲಯವು ಮೊಕದ್ದಮೆ ಸಂಖ್ಯೆ : C.I. Misc No. 83/2008 ರಲ್ಲಿನ ದಿನಾಂಕ:28.1.08 ರ ಆದೇಶದಂತೆ ಜಾಮೀನು ಪಡೆದು ಬಿಡುಗಡೆಯಾಗಿರುತ್ತಾರೆಂದು ಆರಕ್ಷಕ ನಿರೀಕ್ಷಕರು ವಿಜಯನಗರ ಪೊಲೀಸ್ ಠಾಣೆ, ಮೈಸೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ ವರದಿಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 004 ಕೆಇವಿ 08 ಬೆಂಗಳೂರು ದಿನಾಂಕ:22ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿನ ವಿವರಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(2)(a)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ ಮರೀಗೌಡ ಕೆಎಎಸ್ (ಕಿರಿಯ ಶ್ರೇಣಿ) ಪ್ರಸ್ತುತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ರಾಮನಗರ ಜಿಲ್ಲೆ ರಾಮನಗರ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಇವರು ದಿನಾಂಕ:22–1–08 ರಿಂದ 29–1–08 ರವರೆಗಿನ ಅವಧಿಯಲ್ಲಿ ಅಮಾನತ್ತಿನಲ್ಲಿದ್ದಾರೆಂದು (deemed suspension) ಪರಿಗಣಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 701

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಜೋಗಯ್ಯ, ಕೆಎಎಸ್ (ಕಿರಿಯ ಶ್ರೇಣಿ)(ನಿವೃತ್ತ) ಅಧಿಕಾರಿ, ಅಂದಿನ ತಹಶೀಲ್ದಾರ್ ಶ್ರೀ ವಿ.ಸಿ. ಇನಾಂದಾರ್ ಅಂದಿನ ಹಕ್ಕುದಾಖಲೆ ಶಿರಸ್ತೇದಾರ್ ಶ್ರೀ ಐ.ಕೆ. ತಟಗಾರ್ ಅಂದಿನ ಗ್ರಾಮ ಲೆಕ್ಕಿಗರು, ಶ್ರೀಮತಿ ಎಂ ಲೀಲಾವತಿ ಅಂದಿನ ದ್ವಿತೀಯ ದರ್ಜೆ ಸಹಾಯಕರು ಶ್ರೀ ಸುನೀಲ್ ಕುಮಾರ್ ಅಂದಿನ ದ್ವಿತೀಯ ದರ್ಜೆ ಭೂಮಾಪಕರು ಮತ್ತು ಶ್ರೀ ಡಿ.ಎಂ. ಆಂಜಿನಪ್ಪ ಅಂದಿನ ದ್ವಿತೀಯ ದರ್ಜೆ ಭೂಮಾಪಕರು ತಾಲ್ಲೂಕು ಕಛೇರಿ, ಹೊಸಕೋಟೆ ತಾಲ್ಲೂಕು, ಹೊಸಕೋಟೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಮಂಡನಾಧಿಕಾರಿಯನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:17–1–08ರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 260 ಕೆಇವಿ 07
2 ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ ಬೆಂಗಳೂರು ಇವರ ಪತ್ರ ಸಂಖ್ಯೆ :ಸಿಸಿಎ (2) ಸಿಆರ್ 58/2007–08 ದಿನಾಂಕ:18–2–08.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಜೋಗಯ್ಯ ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ. ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರರ ಹುದ್ದೆಯಲ್ಲಿ ಶ್ರೀ ವಿ.ಸಿ. ಇನಾಂದಾರ್ ರವರು ಹಕ್ಕುದಾಖಲೆ ಶಿರಸ್ತೇದಾರರ ಹುದ್ದೆಯಲ್ಲಿ ಶ್ರೀ ಐ.ಕೆ. ತಟಗಾರ್ ದೊಡ್ಡಹುಲ್ಲೂರು ವೃತ್ತದ ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಶ್ರೀಮತಿ ಎಂ ಲೀಲಾವತಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಶ್ರೀ ಸುನೀಲ್ ಕುಮಾರ್ ದ್ವಿತೀಯ ದರ್ಜೆ ಭೂ ಮಾಪಕರ ಹುದ್ದೆಯಲ್ಲಿ ಮತ್ತು ಶ್ರೀ ಡಿ.ಎಂ ಆಂಜಿನಪ್ಪ ದ್ವಿತೀಯ ದರ್ಜೆ ಭೂ ಮಾಪಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರುಗಳ ವಿರುದ್ಧ ಹೊಸಕೋಟೆ ತಾಲ್ಲೂಕು ಕಸಬಾ ಹೋಬಳಿ ಚಿಕ್ಕಹುಲ್ಲೂರು ಗ್ರಾಮದ ಸರ್ಕಾರಿ ಜಮೀನು ಸರ್ವೆ ನಂ 25ರಲ್ಲಿ ಒಟ್ಟು 7 ಜನರಿಗೆ ಖೋಟಾ (Bogus) ಸಾಗುವಳಿ ಚೀಟಿ ಆಧಾರದ ಮೇಲೆ ಮಂಜೂರು ಮಾಡಲಾಗಿದೆ ಎನ್ನುವ ಸೃಷ್ಠಿತ ಕಡತದ ಆಧಾರದ ಮೇಲೆ ಪೋಡಿ ದುರಸ್ತಿಪಡಿಸಿ ಹೊಸ ಸರ್ವೆ ನಂ 54 ರಿಂದ 70 ಎಂದು

ಒಟ್ಟು 17 ಜನರ ಹೆಸರಿಗೆ 58–00 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿಗೆ ಅಕ್ರಮ ದಾಖಲೆ ಸೃಷ್ಟಿಸಿರುವ ಆರೋಪದ ಸಂಬಂಧ ಸದರಿ ನಿವೃತ್ತ ಅಧಿಕಾರಿ /ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಿ, ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಪ್ರಾದೇಶಿಕ ಆಯುಕ್ತರು ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಬೆಂಗಳೂರುರವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಕ್ರಮ ಸಂಖ್ಯೆ (2) ಓದಲಾದ ಪತ್ರದಲ್ಲಿ ಮಂಡನಾಧಿಕಾರಿಯಾದ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಇವರಿಗೆ ಕಛೇರಿಯಲ್ಲಿ ಚುನಾವಣೆ ಸಂಬಂಧ ತುರ್ತು ಕೆಲಸಗಳಿದ್ದು ಹಾಗೂ ಸಾರ್ವಜನಿಕ ಕುಂದುಕೊರತೆ ಸಭೆಗಳಲ್ಲಿ ಹಾಜರಾಗಬೇಕಾಗಿದ್ದು, ಕಛೇರಿಯಲ್ಲಿ ಇತರೆ ಕೆಲಸದ ಒತ್ತಡವೂ ಹೆಚ್ಚಾಗಿರುವ ಕಾರಣ, ಇವರ ಬದಲಿಗೆ ಶ್ರೀ ದೊಡ್ಡಪ್ಪ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 260 ಕೆಇವಿ 07 ಬೆಂಗಳೂರು ದಿನಾಂಕ:24ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮಾವಳಿ, 1957ರ ನಿಯಮ 11(5)(c)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಬದಲಿಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ರಾಷ್ಟ್ರೀಯ ಹೆದ್ದಾರಿಗಳು ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ವಿಚಾರಣೆಯನ್ನು ತ್ವರಿತವಾಗಿ ಮುಗಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್. 702

**ಕಂದಾಯ ಸಚಿವಾಲಯ**

**ವಿಷಯ:** ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷರ ಮತ್ತು ಕಾರ್ಯಕಾರಿ ಮಂಡಳಿಯ ಚುನಾವಣೆ ನಡೆಸುವ ಬಗ್ಗೆ ಆಡಳಿತಾಧಿಕಾರಿಗಳ ಬದಲಾವಣೆ ಕುರಿತು–ಆದೇಶ

**ಓದಲಾಗಿದೆ:**
1. ಕಾರ್ಯದರ್ಶಿಗಳು,. ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ಇವರ ಕಡತ ಸಂಖ್ಯೆ:ವಾಪ್ರ 416 ಕರಅ 2007 ದಿನಾಂಕ:11–12–2007 ರಲ್ಲಿ ಕೋರಿಕೆ
2 ಸರ್ಕಾರದ ಆದೇಶ ಸಂಖ್ಯೆ:ಕಂಇ 5 ಮುನೋಸೊ 2008 ದಿನಾಂಕ:12–2–2008
3 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಸಿಬ್ಬಂದಿ (1) ಸಿಆರ್ 154/2007–08 ದಿನಾಂಕ:20–3–2008 ಮತ್ತು 26–3–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಕಾರ್ಯದರ್ಶಿಯವರು ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ಇವರು ಪ್ರಸ್ತುತ ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತ ಮಂಡಳಿಯ ಅಧಿಕಾರ ಅವಧಿಯು ದಿನಾಂಕ: 1–11–2007 ಕ್ಕೆ ಕೊನೆಗೊಂಡಿದೆ. ದಿನಾಂಕ:29–7–2007 ರಂದು ನಡೆದ ಪರಿಷತ್ತಿನ ಉನ್ನತ ಆಡಳಿತ ಮಂಡಳಿಯಾಗಿರುವ ಚುನಾಯಿತ ಸದಸ್ಯರನ್ನೊಳಗೊಂಡ ಕಾರ್ಯಕಾರಿ ಸಮಿತಿಯು ಪ್ರಸ್ತುತ ಕಾರ್ಯಕಾರಿ ಸಮಿತಿ ಹಾಗೂ ಅಧ್ಯಕ್ಷರ ಅಧಿಕಾರಾವಧಿಯನ್ನು 2008ರ ಏಪ್ರಿಲ್ 30 ರವರೆಗೆ ವಿಸ್ತರಿಸಿ ನಿರ್ಣಯ ಕೈಗೊಂಡಿರುವುದಾಗಿ ಅಧ್ಯಕ್ಷರು ತಿಳಿಸಿರುವುದರಿಂದ ಪರಿಷತ್ತಿನ ಅಧ್ಯಕ್ಷರ ಹಾಗೂ ಕಾರ್ಯಕಾರಿ ಸಮಿತಿ ಸದಸ್ಯರ ಆಯ್ಕೆಗೆ ಪರಿಷತ್ತಿನ ನಿಬಂಧನೆಗಳ ಪ್ರಕಾರ ಚುನಾವಣಾಧಿಕಾರಿ ನೇಮಕ ಮಾಡುವಂತೆ ಕೋರಿದ್ದರ ಮೇರೆಗೆ ಮೇಲೆ ಓದಲಾದ (2) ರ ಸರ್ಕಾರದ ಆದೇಶದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಕಾರ್ಯಕಾರಿ, ಸಮಿತಿ ಸದಸ್ಯರನ್ನು ಚುನಾಯಿಸಲು ಉಪ ವಿಭಾಗಾಧಿಕಾರಿ, ಬೆಂಗಳೂರು ಉತ್ತರ ಉಪ ವಿಭಾಗ, ಬೆಂಗಳೂರು ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ (3) ರ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ದಿನಾಂಕ:20–3–2008 ಹಾಗೂ 26–3–2008 ರ ಅರೆ ಸರ್ಕಾರಿ ಪತ್ರಗಳಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ಸಾಮಾನ್ಯ ಚುನಾವಣೆಯ ಮತದಾರರ ಪಟ್ಟಿ ಪರಿಷ್ಕರಣೆ ಮತ್ತು ಕ್ಷೇತ್ರ ಪುನರ್ ವಿಂಗಡನೆ ಕಾರ್ಯವನ್ನು ನಿಗದಿತ ಸಮಯದಲ್ಲಿ ಪೂರ್ಣಗೊಳಿಸುವ ತುರ್ತು ಕ್ರಮ ಕೈಗೊಳ್ಳಬೇಕಾಗಿರುವುದರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶ್ರೀ ಹೆಚ್.ಆರ್. ರಾಮಕೃಷ್ಣ, ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ, ಬೆಂಗಳೂರು ಇವರ ಬದಲಿಗೆ ಶ್ರೀ ಕೆ. ನಾಗರಾಜ್ ಉಪ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರನ್ನು ಸದರಿ ಪರಿಷತ್ತಿನ ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಕೋರಿಕೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 5 ಮುನೋಸೊ 2008, ಬೆಂಗಳೂರು, ದಿನಾಂಕ:16ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಕಾರ್ಯಕಾರಿ ಸಮಿತಿ ಸದಸ್ಯರನ್ನು ಚುನಾಯಿಸಲು ಚುನಾವಣಾಧಿಕಾರಿಯನ್ನಾಗಿ ಉಪ ವಿಭಾಗಾಧಿಕಾರಿ ಬೆಂಗಳೂರು ಉತ್ತರ ಉಪ ವಿಭಾಗ, ಬೆಂಗಳೂರು ಇವರನ್ನು ನೇಮಕ ಮಾಡಲಾಗಿದ್ದ ಸರ್ಕಾರದ ಆದೇಶ ಸಂಖ್ಯೆ:ಕಂಇ 5 ಮುನೋಸೊ 2008 ದಿನಾಂಕ:12–2–2008ನ್ನು ಈ ಕೂಡಲೇ ಜಾರಿಗೆ ಬರುವಂತೆ ಹಿಂತೆಗೆದುಕೊಂಡು ಇವರ ಬದಲಿಗೆ ಶ್ರೀ ಕೆ. ನಾಗರಾಜ್ ಉಪ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರನ್ನು ಸದರಿ ಪರಿಷತ್ತಿನ ಚುನಾವಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 699

**ಪಿ. ನರಸಿಂಹಮೂರ್ತಿ**

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ತಿದ್ದುಪಡಿ ಆದೇಶ**

**ಸಂಖ್ಯೆ:ಆರ್ ಡಿ 84 ,ಮುಆಬಿ 2007, ಬೆಂಗಳೂರು, ದಿನಾಂಕ:22ನೇ ಏಪ್ರಿಲ್ 2008**

ಸರ್ಕಾರಿ ಆದೇಶ ಸಂಖ್ಯೆ:ಕಂಇ 84 ಮುಆಬಿ 2007, ದಿನಾಂಕ:21.2.2008ರ ಆದೇಶ ಭಾಗದ "ಈ ವಿಷಯದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ, 1999 ಮತ್ತು ನಿಯಮಾವಳಿ 2000ನ್ನು ಎಲ್ಲೆಲ್ಲಿ ಅವಶ್ಯಕವಾಗಿದೆಯೋ ಅಲ್ಲಲ್ಲಿ ಪಾಲಿಸತಕ್ಕದ್ದು" ಎಂಬುದನ್ನು ಆದೇಶ ಭಾಗದಿಂದ ಕೈಬಿಡಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 697

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಇಲಾಖಾ ವಿಚಾರಣೆ–ಶ್ರೀ ಎಂ.ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ರವರ ವಿರುದ್ಧ ವಿಚಾರಣೆಯನ್ನು ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 48 ಎಸ್ ಎಎಂ 2000 ದಿ:9–4–01

2 ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರ ಪತ್ರ ಸಂಖ್ಯೆ: Compt/Lok/MYS-2/2001-02/ARE-5 ದಿನಾಂಕ:14–6–2007

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮೈಸೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು ರಾಜ್ಯದಲ್ಲಿನ ದೇವಾಲಯಗಳ ಸಂರಕ್ಷಣಾ ಕಾರ್ಯದ ಹೆಸರಿನಲ್ಲಿ ಯಾವುದೇ ಸಂರಕ್ಷಣಾ ಕಾಮಗಾರಿಗಳನ್ನು ಮಾಡದೆ ಕೇವಲ ಬೋಗಸ್ ಬಿಲ್ಲುಗಳನ್ನು ಮಾಡಿ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದ ಹಾಗೂ ಈ ಅಕ್ರಮಗಳಿಗೆ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಎಂ.ವಿ. ಕೃಷ್ಣಪ್ಪ ಮತ್ತು ಇಲಾಖೆಯ ಸಹಾಯಕ ಕಾರ್ಯಪಾಲಕರ ಇಂಜಿನಿಯರ್ ಆದ ಶ್ರೀ ಎಸ್.ಎಂ. ಪೂಜಾರ್ ಅವರುಗಳೇ ಕಾರಣ ಎಂಬುದಾಗಿ

ಸಾಕಷ್ಟು ದೂರುಗಳು ಬಂದಿದ್ದರಿಂದ ಸದರಿ ದೂರಿನ ಸತ್ಯಾಸತ್ಯತೆಯನ್ನು ತಿಳಿಯಲು ತನಿಖೆ ನಡೆಸುವ ಸಲುವಾಗಿ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಿ ಆದೇಶಿಸಲಾಗಿತ್ತು.

ಕರ್ನಾಟಕ ಲೋಕಾಯುಕ್ತವು ಪ್ರಕರಣದ ಬಗ್ಗೆ ತನಿಖೆ ನಡೆಸಿ ಉಲ್ಲೇಖ 2ರ ಪತ್ರದೊಂದಿಗೆ ವರದಿಯನ್ನು ಸಲ್ಲಿಸಿದೆ. ವರದಿಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಹಿಂದಿನ ನಿರ್ದೇಶಕರುಗಳಾದ ಶ್ರೀ ಎಂ.ವಿ ಕೃಷ್ಣಪ್ಪ, ಶ್ರೀ ಎಂ.ಎಲ್. ಶಿವಶಂಕರ್ ಮತ್ತು ಶ್ರೀ ಡಿ.ವಿ ದೇವರಾಜ್ ಇವರುಗಳ ನಿಯಮಗಳನ್ನು ಪಾಲನೆ ಮಾಡದೆ ನಿಯಮಗಳನ್ನು ಉಲ್ಲಂಘಿಸಿರುವುದರಿಂದ ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಿ ಕರ್ನಾಟಕ ಲೋಕಾಯುಕ್ತ ಕಾಯ್ದೆ, 1984ರ ಕಾಲಂ 12(4)ರನ್ವಯ ವರದಿ ಸಲ್ಲಿಸುವಂತೆ ಕೋರಿರುತ್ತಾರೆ. ತನಿಖಾ ವರದಿಯನ್ನು ಪರಿಶೀಲಿಸಲಾಗಿ ತನಿಖಾ ವರದಿಯಲ್ಲಿ ಪ್ರಸ್ತಾಪಿಸಿರುವಂತೆ ಆರೋಪಿತರಾದ ಶ್ರೀ ಎಂ.ಎಲ್. ಶಿವಶಂಕರ್ ಮತ್ತು ಶ್ರೀ ಡಿ.ವಿ. ದೇವರಾಜ್ ಹಿಂದಿನ ನಿರ್ದೇಶಕರುಗಳು, ಇವರುಗಳು ನಿವೃತ್ತರಾಗಿರುವುದರಿಂದ ಇವರ ವಿರುದ್ಧ ವಿಚಾರಣೆ ಹೂಡಲು ಅವಕಾಶವಿರುವುದಿಲ್ಲ ಆದ್ದರಿಂದ ಶ್ರೀ ಎಂ.ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಸ್ತುತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ ಇವರುಗಳ ವಿರುದ್ಧ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ:ಕಸಂವಾಪ್ರ 182 ಕೆಎಂಯು 2007 ಬೆಂಗಳೂರು, ದಿನಾಂಕ:28ನೇ ಏಪ್ರಿಲ್ 2008**

ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ವಿ. ಕೃಷ್ಣಪ್ಪ ಹಿಂದಿನ ನಿರ್ದೇಶಕರು (ಪ್ರಸ್ತುತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ) ಇವರ ವಿರುದ್ಧ ಮೇಲ್ಕಂಡ ಆರೋಪ ಕುರಿತು ಇಲಾಖಾ ವಿಚಾರಣೆ ಹಾಗೂ ವರದಿಗಾಗಿ ಪ್ರಕರಣವನ್ನು ಸನ್ಮಾನ್ಯ ಲೋಕಾಯುಕ್ತರಿಗೆ ಈ ಮೂಲಕ ವಹಿಸುತ್ತದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 698

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)

**ತಿದ್ದೋಲೆ**

**ಸಂಖ್ಯೆ:ಕಸಂವಾಪ್ರ 46 ಕೆಎಲ್ 2007, ಬೆಂಗಳೂರು ದಿನಾಂಕ:20ನೇ ಮಾರ್ಚ್ 2008**

ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 46 ಕೆಎಲ್ 2007 ದಿನಾಂಕ:15–3–2008ರಲ್ಲಿನ ಆದೇಶ ಭಾಗದಲ್ಲಿನ 3 ಮತ್ತು 4ನೇ ಸಾಲಿನಲ್ಲಿ ನಮೂದಿಸಲಾದ "ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರಿಗೆ" ಎಂಬುದನ್ನು ದಿನಾಂಕ:15–3–2008 ರಿಂದಲೇ ಜಾರಿಗೆ ಬರುವಂತೆ ತೆಗೆದುಹಾಕಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 563

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ.
(ಆಡಳಿತ ಕನ್ನಡ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕನ್ನಡ ನುಡಿ ತಂತ್ರಾಂಶದ ಶಿಷ್ಟತೆ ಮತ್ತು ಏಕರೂಪತೆ ಬಗ್ಗೆ

**ಓದಲಾಗಿದೆ:**
1. ಮಾಹಿತಿ ತಂತ್ರಜ್ಞಾನ ಕುರಿತಂತೆ ದಿನಾಂಕ:18–3–2000 ರಂದು ಘೋಷಿಸಿದ ಸಹಸ್ರಮಾನದ ಮಾಹಿತಿ ತಂತ್ರಜ್ಞಾನ ನೀತಿ
2. ಸರ್ಕಾರದ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಅ.ಸ. ಪತ್ರ ಸಂಖ್ಯೆ ಸಂಕಿ 238 ಸ್ವೀಮರ 99(ಭಾ) ದಿನಾಂಕ:22.4.2000
3. ಸರ್ಕಾರದ ಆದೇಶ ಸಂಖ್ಯೆ:ಮಾತಂಇ 6 ನೀಸಂವಿ 2000 ಬೆಂಗಳೂರು, ದಿನಾಂಕ:1–11–2000
4. ಕಾರ್ಯದರ್ಶಿಗಳು, ಇ–ಆಡಳಿತ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡುವಳಿ ಸಿ.ಆ.ಸು.ಇ 67 ಇಆಇ 2004 ದಿನಾಂಕ:2–4–2008.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರವು ಸಿದ್ದಪಡಿಸಿರುವ ನುಡಿ ಕನ್ನಡ ತಂತ್ರಾಂಶವು ಮೇಲೆ 3 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಿಗಧಿಪಡಿಸಿರುವ ಶಿಷ್ಠತೆ ಮತ್ತು ಏಕರೂಪತೆಯನ್ನು ಉಲ್ಲಂಘಿಸಿರುವುದಾಗಿ ಆಪಲ್ ಸಾಫ್ಟ ಕಂಪನಿಯ ಶ್ರೀ ಅನ್ವರಸನ್ ರವರು ನ್ಯಾಯಾಲಯದಲ್ಲಿ ಹೂಡಲಾದ ದಾವೆಗೆ, (ಕೇಸ್ ಸಂಖ್ಯೆ:26657/2004) ನ್ಯಾಯಾಲಯವು ದಿನಾಂಕ:24.3.2008 ರಂದು, ಕನ್ನಡ ಲಿಪಿಗೆ ಬೇಕಾದ ಶಿಷ್ಠತೆ ಮತ್ತು ದ್ವಿ ಭಾಷ ಅಕ್ಷರ ರೂಪಗಳಿಗೆ ಬಳಸಬೇಕಾದ ಸಂಕೇತವನ್ನು ನಿಗಧಿಪಡಿಸಲು ಸಾಧ್ಯವೇ? ಹಾಗೆ ಸಾಧ್ಯವಿದ್ದಲ್ಲಿ ಎಷ್ಟು ದಿನಗಳಲ್ಲಿ ಆದೇಶ ಹೊರಡಿಸಲಾಗುವುದು ಎಂಬುದನ್ನು ತಿಳಿಸಲು ಸೂಚಿಸಿರುತ್ತದೆ. ಅದರಂತೆ ಮೇಲೆ 4ರಲ್ಲಿ ಓದಲಾದ ಸಮಿತಿಯ ನಿರ್ಣಯದಂತೆ, ಕಾರ್ಯದರ್ಶಿಗಳು, ಕನ್ನಡ ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ, ಸೂಕ್ತ ಶಿಫಾರಸ್ಸನ್ನೂ ಪಡೆದು ನ್ಯಾಯಾಲಯಕ್ಕೆ ತಿಳಿಸಲು ತೀರ್ಮಾನಿಸಿರುತ್ತದೆ. ನ್ಯಾಯಾಲಯಕ್ಕೆ 2008 ರ ಮೇ ತಿಂಗಳ ಅಂತ್ಯದೊಳಗೆ ಸರ್ಕಾರವು ತೆಗೆದುಕೊಂಡ ನಿಲುವಿನ ಬಗ್ಗೆ ತಿಳಿಸಬೇಕಾಗಿದೆ. ಕಾರ್ಯದರ್ಶಿಗಳು, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರು ಸಮ್ಮತಿಸಿದ್ದು ಅವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲು ಪ್ರಸ್ತಾಪಿಸಲಾಗಿದೆ ಅಂತೆಯೇ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 39 ಇಆಇ 2008, ಬೆಂಗಳೂರು ದಿನಾಂಕ:25ನೇ ಏಪ್ರಿಲ್ 2008**

ಕನ್ನಡ ಲಿಪಿಗೆ ಬೇಕಾದ ಶಿಷ್ಠತೆ ಮತ್ತು ದ್ವಿಭಾಷ ಅಕ್ಷರ ರೂಪಗಳಿಗೆ ಬಳಸಬೇಕಾದ ಸಂಕೇತಗಳನ್ನು ನಿಗಧಿಪಡಿಸುವ ಸಾಧ್ಯತೆ ಬಗ್ಗೆ ಪರಿಶೀಲಿಸಲು, ಸರ್ಕಾರವು ಈ ಕೆಳ ಸದಸ್ಯರನ್ನೊಳಗೊಂಡಂತೆ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಕಾರ್ಯದರ್ಶಿಗಳು, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ | ಅಧ್ಯಕ್ಷರು |
| 2 | ಕಾರ್ಯದರ್ಶಿಗಳು, ಇ–ಆಡಳಿತ, ಸಿ.ಆ.ಸು.ಇ (ಆ.ಸು) | ಸದಸ್ಯರು |
| 3 | ಕಾರ್ಯದರ್ಶಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ | ಸದಸ್ಯರು |
| 4 | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ | ಸದಸ್ಯರು |
| 5 | ಪ್ರೊ. ಕೆ.ಪಿ. ರಾವ್, ಪ್ರಿಂಟಿಂಗ್ ಮತ್ತು ಮೀಡಿಯ ಇಂಜಿನಿಯರಿಂಗ್ ವಿಭಾಗ, ಮಣಿಪಾಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಮಣಿಪಾಲ್ | ಸದಸ್ಯರು |
| 6 | ಪ್ರೊ. ಪಂಡಿತಾರಾಧ್ಯ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು | ಸದಸ್ಯರು |
| 7 | ಶ್ರೀ ಎನ್. ರಾಜು, ಸೀನಿಯರ್, ಪ್ರೋಗ್ರಾಮರ್, ಮುಖ್ಯ ಚುನಾವಣಾಧಿಕಾರಿಗಳ ಕಛೇರಿ, ಬೆಂಗಳೂರು | ಸದಸ್ಯರು |
| 8 | ಉಪ ಕಾರ್ಯದರ್ಶಿ, ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ | ಸದಸ್ಯ ಕಾರ್ಯದರ್ಶಿ |

2. ಮೇಲೆ ತಿಳಿಸಿರುವ ಸಮಿತಿಯು ದಿನಾಂಕ:20–5–2008 ರೊಳಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

3. ಸಮಿತಿ ಸಭೆಗೆ ಹಾಜರಾಗುವ ಅಧಿಕಾರರೇತರ ಸದಸ್ಯರಿಗೆ ರೈಲಿನ ಮೊದಲ ದರ್ಜೆ ಅಥವಾ ಬಸ್ ದರದ ಪ್ರಯಾಣದ ವೆಚ್ಚ ಹಾಗೂ ಪ್ರತಿ ಸಭೆಗೆ ಹಾಜರಾದ ದಿನದಂದು ಗೌರವಧನವಾದ ರೂ. 1000/– (ರೂಪಾಯಿ ಒಂದು ಸಾವಿರ ಮಾತ್ರ) ಪಡೆಯಲು ಅರ್ಹರಾಗಿರುತ್ತಾರೆ.

4. ಈ ವೆಚ್ಚವನ್ನು ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 3451–00–090–2–04–059 (ಯೋಜನೇತರ) ದಿಂದ ಭರಿಸುವುದು.

5. ಈ ಆದೇಶವನ್ನು ದಿನಾಂಕ:10–7–1996ರ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರಗಳ ಮೇರೆಗೆ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 703

**ಗಂಗಾಧರ ನಿಂ ದಾಟನಾಳ**

ಪೀಠಾಧಿಕಾರಿ (ಪ್ರ), ಇ–ಆಡಳಿತ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಆಸು)

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17ರ ಭಾಗವಾದ ಬೆಂಗಳೂರು–ಮದ್ದೂರು ನಾಲ್ಕು ಪಥದ ರಸ್ತೆಯನ್ನು ವರ್ಷಾಸನ ಆಧಾರದ ಮೇಲೆ (ಅನ್ಯೂಟಿ ಸ್ಕೀಮ್) ಕೈಗೊಂಡಿರುವ ಮೆ:ಬೃಂದಾವನ್ ಇನ್ ಫ್ರಾಸ್ಟ್ರಕ್ಚರ್ ಕಂಪನಿ ಲಿ. ರವರಿಗೆ 4ನೇ ಅರ್ಧ ವರ್ಷಾಸನವನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಲೋಇ/96/ಇಎಪಿ/2003 ದಿನಾಂಕ:15.11.2003
2. ಕನ್ಸಿಷನ್ ಅಗ್ರಿಮೆಂಟ್ ದಿನಾಂಕ:22–1–2004
3 ಸರ್ಕಾರದ ಸಮಸಂಖ್ಯೆ ಆದೇಶ ದಿನಾಂಕ:17–4–2007 ಮತ್ತು 22–10–2007.
4 ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆಆರ್‌ಡಿಸಿಎಲ್/ವ್ಯ.ನಿ/2008–09/0014 ದಿನಾಂಕ:2–4–2008

**ಪ್ರಸ್ತಾವನೆ:**

ಓದಲಾಗಿರುವ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17ನ್ನು ನಾಲ್ಕು ಪಥದ ರಸ್ತೆಯನ್ನಾಗಿ ಪರಿವರ್ತಿಸುವಲ್ಲಿನ ಬೆಂಗಳೂರಿನಿಂದ ಮದ್ದೂರುವರೆಗೆ ಇರುವ ಮೊದಲನೇ ಪ್ಯಾಕೇಜ್ ಗುತ್ತಿಗೆಯನ್ನು ಮೆ:ಕೆ.ಎಂ.ಸಿ. ಕನ್ಸ್‌ಟ್ರಕ್ಷನ್ಸ್ ಮೆ:ನಾಗಾರ್ಜುನ ಕನ್ಸ್‌ಟ್ರಕ್ಷನ್ಸ್ ಲಿ ಮತ್ತು ಮೆ: ಮೈಟಾಸ್ ಕನ್ಸ್‌ಟ್ರಕ್ಷನ್ಸ್ ಕಂಪನಿ (ಜೆ.ವಿ) ಇವರಿಗೆ ವಹಿಸಿದ್ದು, ಅರ್ಧವಾರ್ಷಿಕ ಪಾವತಿ ಮೊತ್ತವಾದ ರೂ. 29.70 ಕೋಟಿ ಯೋಜನೆಯ ಮುಗಿದ ಮೇಲೆ ಎಂಟು ವರ್ಷಗಳು ಪಾವತಿ ಮಾಡಲು ಆದೇಶ ಹೊರಡಿಸಲಾಗಿತ್ತು.

ಓದಲಾದ (2)ರಲ್ಲಿನ ದಿನಾಂಕದಂದು ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿಮಿಟೆಡ್ (ಕನ್ಸೆಷನ್ನೈರ್) ಹೆಸರಿನಲ್ಲಿ ಸ್ಪೆಷಲ್ ಪ್ರಾಜೆಕ್ಟ್ ವೆಹಿಕಲ್‌ನಂತೆ ಕನ್ಸೆಷನ್ ಅಗ್ರಿಮೆಂಟ್ ಮಾಡಿಕೊಳ್ಳಲಾಗಿದೆ.

ಓದಲಾದ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಮೊದಲನೇ ಅನ್ಯೂಟಿ ಮೊತ್ತವಾದ ರೂ. 29.70 ಕೋಟಿಗಳನ್ನು ಮೆ:ಬೃಂದಾವನ್ ಇನ್ ಫ್ರಾಸ್ಟ್ರಕ್ಚರ್ ಕಂಪನಿ ಲಿಮಿಟೆಡ್ ರವರಿಗೆ ಪಾವತಿಸಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿತ್ತು. ದಿನಾಂಕ:17–4–2007 ಮತ್ತು 22–10–2007 ರಂದು ಹೊರಡಿಸಲಾಗಿರುವ ಸರ್ಕಾರಿ ಆದೇಶಗಳಲ್ಲಿ ಎರಡನೇ ಮತ್ತು ಮೂರನೇ ಅನ್ಯೂಟಿ ಮೊತ್ತವಾದ ರೂ. 29.70 ಕೋಟಿಗಳನ್ನು ಸದರಿ ಕಂಪನಿಗೆ ಪಾವತಿಸಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಓದಲಾದ (4) ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ 2–4–2008ರ ಪತ್ರದಲ್ಲಿ ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿಮಿಟೆಡ್ ರವರಿಗೆ ನಾಲ್ಕನೇ ಕಂತಿನ ಮೊತ್ತವಾದ ರೂ. 29.70 ಕೋಟಿಗಳನ್ನು ದಿನಾಂಕ:21–4–2008 ರೊಳಗೆ ಪಾವತಿಸಬೇಕಾಗಿರುವುದರಿಂದ ರೂ. 29.70 ಕೋಟಿ ಹಣವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದವರಿಗೆ ಬಿಡುಗಡೆ ಮಾಡುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಲೋಇ/22/ಇಎಪಿ/2008, ಬೆಂಗಳೂರು, ದಿನಾಂಕ:19ನೇ ಏಪ್ರಿಲ್ 2008**

ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿಯ ಭಾಗವಾದ ಬೆಂಗಳೂರು–ಮದ್ದೂರನ್ನು ನಾಲ್ಕು ಪಥದ ರಸ್ತೆಯನ್ನಾಗಿ ಪರಿವರ್ತಿಸುವ ಕಾಮಗಾರಿಯನ್ನು ಕೈಗೊಂಡು ಮುಗಿಸಲಾದ ಮೆ:ಬೃಂದಾವನ್ ಇನ್ ಫ್ರಾಸ್ಟ್ರಕ್ಚರ್ ಕಂಪನಿಗೆ ಪಾವತಿಬೇಕಾದ ನಾಲ್ಕನೇ ಅನ್ಯೂಟಿ ಮೊತ್ತವಾದ (ಅರ್ಧ ವಾರ್ಷಿಕ ಪಾವತಿ) 29.70 ಕೋಟಿ ರೂಪಾಯಿಗಳನ್ನು (ಇಪ್ಪತ್ತೊಂಬತ್ತು ಕೋಟಿ ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ 5054–80–190–0–01–132 ಬಂಡವಾಳ (ಯೋಜನೆ) ಅಡಿಯಲ್ಲಿ, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಆದೇಶ ಹೊರಡಿಸಲಾಗಿದೆ.

ಮುಂದುವರೆದು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ 29.70 ಕೋಟಿ ರೂಪಾಯಿಗಳ ಬಿಲ್ಲನ್ನು ಕೆ.ಎಫ್.ಸಿ 17ಎ (II) ಸಿ ರಲ್ಲಿನಂತೆ ಮಹಾಲೇಖಪಾಲರು (ಎ ಅಂಡ್ ಇ) ಇವರಿಂದ ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲು ರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ/230/ಆಕೋ. 1/08 ದಿನಾಂಕ:19.4.2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 704

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ

ಒಳನಾಡು ಜಲಸಾರಿಗೆ ಇಲಾಖೆ. (ಇಎಪಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಸ್ವರ್ಣಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2008–2009ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅನಧಿಕೃತ ಟಿಪ್ಪಣಿ ಸಂಖ್ಯೆ:ಗ್ರಾಅಪ 29 ಯೋಉಮಾ 2008 ದಿನಾಂಕ:8–4–2008.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ ಪಿಡಿ 17 ಐಎಂಎಂ 2005 ದಿನಾಂಕ10–8–2005 ರ ಪ್ರಕಾರ ಮಂಜೂರಾತಿ ನೀಡಲು ಅಧಿಕಾರವನ್ನು ಹೊಂದಿರುವುದರಿಂದ, 2008–09ನೇ ಸಾಲಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳ ಕಾರ್ಯಕ್ರಮಗಳನ್ನು ಮುಂದುವರಿಸಲು ಮಂಜೂರಾತಿ ಆದೇಶವನ್ನು ನೀಡಬೇಕಾಗಿದೆ. ಇದರನ್ವಯ ಈ ಸಂಬಂಧದಲ್ಲಿ 2007–2008ನೇ ಸಾಲಿನಲ್ಲಿ ಅನುಷ್ಠಾನಗೊಂಡ ಕಾರ್ಯಕ್ರಮಗಳನ್ನು ಮುಂದುವರಿಸಬೇಕಾಗಿದೆ. ಇದರಂತೆ 2008–2009ನೇ ಸಾಲಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಮುಂದುವರೆಸಿ ಅನುಷ್ಠಾನಗೊಳಿಸಬೇಕಾಗಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 25 ಎಸ್‌ಜಿವೈ 2008, ಬೆಂಗಳೂರು ದಿನಾಂಕ:17ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರವು ಈ ಯೋಜನೆಗೆ ನಿಗಧಿ ಪಡಿಸಬಹುದಾದ ಅನುದಾನ ಹಾಗೂ ವಿಧಿಸಬಹುದಾದ ಷರತ್ತುಗಳಿಗೆ ಒಳಪಟ್ಟು 2008–09ನೇ ಸಾಲಿಗೆ ಮುಂದುವರೆಸಿದೆ.

2008–2009ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಲೆಕ್ಕ ಶೀರ್ಷಿಕೆ: "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್ ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–2009 (2501–01–198–6–01)" ಭರಿಸತಕ್ಕದ್ದು.

**ಡಿಆರ್‌ಡಿಎ (ಆಡಳಿತ) ಲೆಕ್ಕ ಶೀರ್ಷಿಕೆ:** "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–606)" ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 186 ಪಿಬಿಎಸ್ 2008 ದಿನಾಂಕ:17–4–2008ರಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 705

**ಸಿ.ಎಂ. ಶಿರೋಳ್**

ನಿರ್ದೇಶಕರು [ಪಿಪಿಯಂಯು] ಹಾಗೂ ಪ.ನಿ.

ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2007–08ನೇ ಸಾಲಿಗೆ 2ನೇ ಕಂತಿನಲ್ಲಿ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಲಾ 18 ಎಲ್ಎಡಿ 2007 ದಿನಾಂಕ:10–5–2007

2 ಪತ್ರ ಸಂಖ್ಯೆ:ಕರಾಕಾಸೇಪ್ರಾ ಅಕೌಂಟ್ಸ್ 1–2007 ದಿನಾಂಕ:5–12–2007

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2007–08ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2235–60–200–5–01–(101–ಸಹಾಯಾನುದಾನ) ರಡಿ ರೂ. 11 ಕೋಟಿ 42 ಲಕ್ಷಗಳ ಮೊತ್ತದ ಆಯವ್ಯಯ ಅವಕಾಶ ಒದಗಿಸಿಕೊಳ್ಳಲಾಗಿದ್ದು, ಸದರಿ ಮೊತ್ತದಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ:10–5–2007ರ ಆದೇಶದಲ್ಲಿ ರೂ. 380.00 ಲಕ್ಷಗಳನ್ನು ಮೊದಲನೇ ಕಂತಾಗಿ ಬಿಡುಗಡೆ ಮಾಡಲಾಗಿದೆ.

ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ಇವರು ಮೇಲೆ (2)ರಲ್ಲಿ ಓದಲಾದ ದಿನಾಂಕ:5–12–07 ರ ಪತ್ರದಲ್ಲಿ ಪ್ರಾಧಿಕಾರದ ಖರ್ಚು, ಕಾರ್ಯಕ್ರಮಗಳ ವೆಚ್ಚಗಳಿಗೆ ಹಾಗೂ ತಾಲ್ಲೂಕು ಸಮಿತಿಗಳಿಗೆ ವಿವಿಧ ಖರ್ಚುಗಳ ಬಾಕಿಯನ್ನು ನೀಡಬೇಕಾಗಿರುತ್ತದೆ. ಆದ್ದರಿಂದ ಈ ಎಲ್ಲಾ ಖರ್ಚು ವೆಚ್ಚಗಳಿಗೆ ತುರ್ತಾಗಿ ಎರಡನೇ ಕಂತಾಗಿ ಐದು ಕೋಟಿ ಸಹಾಯಾನುದಾನದ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 18 ಎಲ್ಎಡಿ 2007, ಬೆಂಗಳೂರು, ದಿನಾಂಕ:11ನೇ ಜನವರಿ 2008**

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2007–08ನೇ ಸಾಲಿನಲ್ಲಿ ಎರಡನೇ ಕಂತಾಗಿ ರೂ. 380.00 ಲಕ್ಷಗಳ (ರೂಪಾಯಿ ಮುನ್ನೂರ ಎಂಭತ್ತು ಲಕ್ಷಗಳು ಮಾತ್ರ) ಸಹಾಯಾನುದಾನವನ್ನು ಈ ಕೆಳಗಿನ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:

- ಯೋಚಿತ ಕಾರ್ಯಕ್ರಮಗಳ ಅನುಷ್ಠಾನಗೊಳಿಸಿರುವುದರ ವರದಿ ಸಲ್ಲಿಸುವುದು.
- ಪ್ರಸ್ತುತ ಸಾಲಿಗೆ ಬಿಡುಗಡೆ ಮಾಡಿರುವ ಸಹಾಯಾನುದಾನವನ್ನು ಯಾವ ಉದ್ದೇಶಕ್ಕಾಗಿ ಸೀಮಿತವಾಗಿದೆಯೋ ಅದೇ ಉದ್ದೇಶಕ್ಕಾಗಿ ಬಳಸುವುದು ಮತ್ತು ವಿನಿಯೋಗಿಸಿಕೊಂಡಿರುವ ಕುರಿತಂತೆ ಪ್ರಮಾಣ ಪತ್ರ ಸಲ್ಲಿಸುವುದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235–60–200–5–01–(101–ಸಹಾಯಾನುದಾನ) ಇದರಡಿ ಭರಿಸುವುದು.

ಇದಕ್ಕೆ ಆರ್ಥಿಕ ಇಲಾಖೆ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ 1455 ವೆಚ್ಚ–7:07 ದಿನಾಂಕ:3–1–2008ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 706

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ,(ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಈರಾಬೋವಿ ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು ಹಾಗೂ ಇತರೆ ಸಿಬ್ಬಂದಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕುರಿತು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಆದೇಶ ಸಂ:ಇಎಸ್‌ಟಿ (2)ಸಿಸಿಎ. 2/2006–07, ದಿನಾಂಕ:10–10–2006.

2 ಸರ್ಕಾರದ ಆದೇಶ ಸಂಖ್ಯೆ:ಕಂಇ 69 ಎಡಿಇ 2006, ದಿನಾಂಕ:15–5–2007

3 ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ: 25–5–2007

4 ಶ್ರೀ ಎಸ್. ಮಹಾದೇವಪ್ಪ, ಶಿರಸ್ತೇದಾರ್, ಶ್ರೀ ಗಂಗಾಧರಯ್ಯ ರಾಜಸ್ವ ನಿರೀಕ್ಷಕರು,. ಶ್ರೀ ಅಬ್ದುಲ್ ಖಾಲಿಕ್, ಗ್ರಾಮಲೆಕ್ಕಿಗರು ಇವರುಗಳ ಸಮಜಾಯಿಷಿ ದಿನಾಂಕ:14–6–2007, 15–6–2007 ಮತ್ತು 14–6–2007.

5 ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ವರದಿ ದಿನಾಂಕ:13–2–2008.

**ಪ್ರಸ್ತಾವನೆ:**

ಹೆಚ್.ಡಿ. ಕೋಟೆ ತಾಲ್ಲೂಕು, ಮಷ್ಕೆರೆ ಗ್ರಾಮದ ಸ.ನಂ: :108,109 ಮತ್ತು 110ರ ಜಮೀನಿನ ತಕರಾರು ಬಗ್ಗೆ ಶ್ರೀ ಬಸವೇಗೌಡ, ಮಂಡ್ಯ ಜಿಲ್ಲೆ, ಮಂಡ್ಯರವರು ದಿನಾಂಕ:21–6–2006ರಂದು ಮಾನ್ಯ ಕಂದಾಯ ಸಚಿವರಿಗೆ ಮನವಿ ಸಲ್ಲಿಸಿದ್ದು, ಸದರಿ ಮನವಿಯನ್ನು ಆಧರಿಸಿ ಸರ್ಕಾರವು ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು, ಶ್ರೀ ಮಹದೇವಪ್ಪ,. ಆರ್.ಆರ್. ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹೆಚ್.ಡಿ.ಕೋಟೆ ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ ಹೆಚ್.ಡಿ.ಕೋಟೆ ತಾಲ್ಲೂಕು ಮತ್ತು ಶ್ರೀ ಅಬ್ದುಲ್ ಖಾಲಿಕ್ ಗ್ರಾಮಲೆಕ್ಕಿಗರು, ರಾಜೇಗೌಡನಹುಂಡಿ ವೃತ್ತ ಹೆಚ್.ಡಿ.ಕೋಟೆ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಸರ್ಕಾರದಿಂದ ಅಮಾನತ್ತಿನಲ್ಲಿಡಲು ನೀಡಿರುವ ನಿರ್ದೇಶನದನ್ವಯ ಮೇಲ್ಕಂಡ ನೌಕರರುಗಳನ್ನು ಮೇಲೆ ಓದಲಾದ ಕ್ರ.ಸಂ (1) ದಿನಾಂಕ:10–10–2006ರ ಆದೇಶದಲ್ಲಿ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ನಂತರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಶ್ರೀ ಈರಾಬೋವಿ ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ಮತ್ತು ಇತರರ ಸಿಬ್ಬಂದಿಗಳ ವಿರುದ್ಧ ಅನುಬಂಧ– I ರಿಂದ IV ವರೆಗಿನ ದೋಷಾರೋಪಣಾ ಪಟ್ಟಿಯೊಂದಿಗೆ ದಿನಾಂಕ:26.2.2007 ರನ್ವಯ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರ ಮೇರೆಗೆ ಆರೋಪಿತ ಅಧಿಕಾರಿ/ನೌಕರರಾದ ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ಶ್ರೀ ಮಹದೇವಪ್ಪ. ಆರ್.ಆರ್. ಶಿರಸ್ತೇದಾರ್. ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು ಹಾಗೂ ಶ್ರೀ ಅಬ್ದುಲ್ ಖಾಲಿಕ್ ಗ್ರಾಮ ಲೆಕ್ಕಿಗರು ಇವರುಗಳಿಗೆ ಅನುಬಂಧ I ರಿಂದ IV ವರೆಗಿನ ದೋಷಾರೋಪಣಾ ಪಟ್ಟಿಯೊಂದಿಗೆ ಸಿಸಿಎ ನಿಯಮಾವಳಿಗಳನ್ವಯ ಕಾರಣ ಕೇಳುವ ನೋಟೀಸನ್ನು ದಿನಾಂಕ:24–5–2007ರಲ್ಲಿ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಈರಾಬೋವಿ ನಿವೃತ್ತ ತಹಶೀಲ್ದಾರ್ ಇವರನ್ನು ಬಿಟ್ಟು ಉಳಿದ 3 ನೌಕರರುಗಳು ತಮ್ಮ ಆರೋಪಗಳನ್ನು ಅಲ್ಲಗಳೆಯುತ್ತಾ ತಮ್ಮ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಸಮಜಾಯಿಷಿಯನ್ನು ನೀಡಿರುತ್ತಾರೆ.

ಈ ಮಧ್ಯೆ ಆರೋಪಿತ ನೌಕರರಾದ ಶ್ರೀ ಮಹದೇವಪ್ಪ (ಅಮಾನತ್ತಿನಲ್ಲಿರುವ) ಮತ್ತು ಇತರರು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ದಿನಾಂಕ:10–10–2006 ರ ಅಮಾನತ್ತಿನ ಆದೇಶವನ್ನು ಮಾನ್ಯ ಕರ್ನಾಟಕ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ:3764–66/07 ರಲ್ಲಿ ದಿನಾಂಕ:23–8–2007 ರಂದು ಮಧ್ಯಂತರ ಆದೇಶ ನೀಡಿ ಆಪಾದಿತ ಸರ್ಕಾರಿ ನೌಕರರ ಅಮಾನತ್ತು ತೆರವುಗೊಳಿಸುವ ಕುರಿತು ದಿನಾಂಕ:10–9–2007ರೊಳಗೆ ಕ್ರಮ ಕೈಗೊಂಡು ಪಾಲನಾ ವರದಿ ಸಲ್ಲಿಸುವಂತೆ ನಿರ್ದೇಶನ ನೀಡಲಾಗಿರುತ್ತದೆ. ಸದರಿ ಆದೇಶದನ್ವಯ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ಶ್ರೀ ಮಹದೇವಪ್ಪ, ಹಿಂದಿನ ಆರ್.ಆರ್. ಶಿರಸ್ತೇದಾರ್ ಹೆಚ್.ಡಿ. ಕೋಟೆ ತಾಲ್ಲೂಕು ಕಛೇರಿ ಇವರನ್ನು ದಿನಾಂಕ:19–09–2007 ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸಲಾಗಿರುತ್ತದೆ. ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಇವರು ದಿನಾಂಕ:10–09–2007ರ ಆದೇಶದಲ್ಲಿ ಶ್ರೀ ಗಂಗಾಧರಯ್ಯ, ರಾಜಸ್ವ ನಿರೀಕ್ಷಕರು ನಿವೃತ್ತಿಯಾಗಿರುವುದರಿಂದ ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಪ್ರಶ್ನೆ ಉದ್ಭವಿಸಿರುವುದಿಲ್ಲವೆಂದು ಹಾಗೂ ಇನ್ನುಳಿದ ಶ್ರೀ ಅಬ್ದುಲ್ ಖಾಲಿಕ್, ಗ್ರಾಮಲೆಕ್ಕಿಗರು ಇವರನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನಿಯುಕ್ತಿಗೊಳಿಸಲಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಮಾನ್ಯ ನ್ಯಾಯಾಲಯದ ಗಮನಕ್ಕೆ ತಂದಿದ್ದು ಸದರಿ ಅರ್ಜಿಯು ವಜಾಗೊಂಡಿರುತ್ತದೆ.

ಮೇಲೆ ಓದಲಾದ ಕ್ರ.ಸಂ:5ರಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಶ್ರೀ ಈರಾಬೋವಿ, ನಿವೃತ್ತ ತಹಶೀಲ್ದಾರ್‌ರವರು ದಿನಾಂಕ:6–9–2007ರಂದು ಮರಣ ಹೊಂದಿರುವುದಾಗಿ ವರದಿ ನೀಡಿರುತ್ತಾರೆ. ಸದರಿ ಜಿಲ್ಲಾಧಿಕಾರಿಗಳ ವರದಿ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಈರಾಬೋವಿ, ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು ಇವರನ್ನು ಇಲಾಖಾ ವಿಚಾರಣೆಯಿಂದ ಕೈಬಿಟ್ಟು ಉಳಿದ ಆಪಾದಿತ ನೌಕರರ ವಿರುದ್ಧ ಮಾಡಲಾದ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿಗಳನ್ನು ನೇಮಿಸಲು ಸರ್ಕಾರವು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 69 ಎಡಿಇ 2006, ಬೆಂಗಳೂರು, ದಿನಾಂಕ:25ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಮಹಾದೇವಪ್ಪ ಶಿರಸ್ತೇದಾರ್ (ಪ್ರಸ್ತುತ ಶಿರಸ್ತೇದಾರ್ ಕೊಳ್ಳೇಗಾಲ ತಾಲ್ಲೂಕು ಕಛೇರಿ) ಶ್ರೀ ಗಂಗಾಧರಯ್ಯ, ನಿವೃತ್ತ ರಾಜಸ್ವ

ನಿರೀಕ್ಷಕರು ಮತ್ತು ಶ್ರೀ ಅಬ್ದುಲ್ ಖಾಲಿಕ್ ನಿವೃತ್ತ ಗ್ರಾಮಲೆಕ್ಕಿಗರು ಇವರುಗಳ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ:23–8–2005ರ ಸರ್ಕಾರಿ ಆದೇಶ ಸಂ:ಸಿಆಸುಇ 16 ಸೇಇವಿ 2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಮೈಸೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 & 11 (ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 707

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

## PERSONNEL AND ADMINISTRATIVE REFORMS SECRETARIAT

**Sub :** Terms and conditions of Deputation of Smt Anitha Balakrishna IA & AS Controller (Accounts Management) Finance Department

**Read :** 1. Go.No. DPAR 45 SGO 2000, dated:30-10-01
2. Notification No. DPAR 330 SA.S.SE 2007 dated:08-10-07

**Preamble:**

In The Government Order read at Sl. No. (1) above, sanction was accorded for the creation of a scale less post of Controller (Accounts Management) in Finance Department Karnataka Government Secretariat for a period of one year and the same post is continued from time to time.

In the Notification read at Sl.No. (2) above Smt Anitha Balakrishna, IA & AS Controller (Accounts Management) Finance Department has been appointed on deputation to the post of Controller (Accounts Management), Finance Department, Karnataka Government Secretariat.

The question of prescribing the terms and conditions of deputation of Smt Anitha Balakrishna IA & AS Controller (Accounts Management) Finance Department, Karnataka Government Secretariat has been examined and hence the following order.

**Government Order No. DPAR 330 SA.A.SE 2007, Bangalore, Dated:16th April 2008**

The terms and conditions for deputation of Smt Anitha Balakrishna .IA & AS Controller (Accounts Management) Finance Department Karnataka Government Secretariat are indicated hereunder:

**1) PERIOD OF DEPUTATION:**

The period of deputation of Smt Anitha Balakrishna, IA & AS presently working as Controller (Accounts Management), Finance Department, Karnataka Government Secretariat shall be for a period of one year or until further orders. whichever is earlier.

**2) THE COMMENCEMENT AND TERMINATION OF DEPUTATION:**

The deputation will commence on the date on which she hands over charge of for post under the parent department and ends on the date on which she assumes charge of a post under the parent department.

**3) PAY:**

During the period of deputation she shall receive a pay in the pay scale applicable to the post she hold her parent department.

**4) D.A. /H.R.A./C.C.A.:**

The payment of D.A./H.R.A./C.C.A shall be as provided under the Central Government Rules.

**5) JOINING TIME PAY DURING JOINING TIME AND T.A. FOR JOURNEY ON TRANSFER:**

She will be entitled to T.A. and joining time both on Joining the post on deputation and on reversion to the parent department under the rules of the State Government.

**6) TRAVELLING ALLOWANCE:**

For journeys undertaken after joining on deputation the Government employee shall be entitled to receive T.A. and D.A. as per the State rules under borrowing Government.

**7) LEAVE AND PENSION:**

During the period of deputation she will continue to be governed by the leave and pension rules of the Central Government.

**8) CENTRAL GOVERNMENT EMPLOYEES GROUP INSURANCE SCHEME:**

During the period of deputation she shall continue to subscribe to this scheme and the borrowing Government shall credit recovery effected to the relevant head.

**9) P.F. CONTRIBUTIONS:**

During the period on deputation she shall continue to subscribe to the provident fund of her parent department to which she may be subscribing where she is placed on deputation in accordance with the rules of such fund.

**10) MEDICAL CONCESSION**:

The Official shall be entitled to the Medical attendance as per the Karnataka Government Servant (Medical Attendance) Rules 1983.

11) She shall perform her duties diligently and she shall maintain strict secrecy in respect of official information which she comes to know in the course of her duties.

12) She shall be liable to reimburse to Government all the losses which the Government may sustain due to mis-conduct of any sort or her part.

This order issues with the concurrence of Finance Department vide U.O. Note No.:FD 324 Expenditure 5/2008, dated 13.3.2008.

By Order and in the name of the President of India,

**M.S. SHIVARAM**

Under Secretary to Government

Department of Personnel And Administrative Reforms

(Services-3)

P.R. 669

**COMMERCE & INDUSTRIES SECRETARIAT**

**Sub :** Proposal of M/s Rukminirama Steel Rollings Pvt., Ltd., Bellary to establish 0.3 MTPA Steel Plant consisting of 2 Nos. of 300 TPD sponge Iron Plant, 2 Nos. of 25 tons Electric Arc Furnace and Induction Furance & TMT Rolling Mill and 65 MW Captive Power Plant at Varadpura/Marabbihalu villages, Hagari Bommanahalli Taluk.

**Read :** Proceedings of the 13th State High Level Clearance Committee (SHLCC) meeting held on 13.3.2008.,

**Preamble:**

Proposal of M/s Rukminirama Steel Rollings Pvt. Ltd., Bellary is to establish 0.3 MTPA Steel Plant consisting of 2 Nos of 300 TPD sponge Iron Plant, 2 Nos of 25 tons Electric Arc Furnace and Induction Furance & TMT Rolling Mill and 65 MW Captive Power Plant, in 158. 56 acres of land at Varadpura/Marabbihalu villages, Hagari Bommanahalli Taluk, with an investment of Rs 450.80 crores. The project proposes to provide employment to about 400 persons. The Company has requested for approval of the project and sanction of various Infrastructure facilities as well as incentives and concessions.

The State High Level Clearance Committee, [SHLCC] in its meeting held on 13.3.2008, after detailed discussion of the project proposal of the said Company, approved the proposal of M/s Rukminirama Steel Rollings Pvt. Ltd., and recommended to grant Infrastructure facilities and to extend incentives & concessions. Hence the following order.

**Government Order No: CI 70 SPI 2008, Bangalore, Dated:25th April 2008**

In the circumstances explained above, Government is pleased to approve the Proposal of M/s Rukminirama Steel Rollings Pvt., Ltd Bellary to establish 0.3 MTPA Steel Plant consisting of 2 Nos. of 300 TPD sponge Iron Plant, 2 Nos. of 25 tons Electric Arc Furnace and Induction Furance & TMT Rolling Mill and 65 MW Captive Power Plant, in 158.56 acres of land at Varadpura/Marabbihalu villages, Hagari Bommanahalli Taluk, with an investment of Rs. 450.80 crores. and extend the following infrastructure facilities, incentives and concessions.

**INFRASTRUCTURE FACILITIES:**

**LAND:** The Revenue Department will permit to recommend to Deputy Commissioner, Bellary to the Company to purchase a total extent of 158.56 acres of private land U/s 109 of KLR Act and convert the same to industrial purpose thereafter.

**Power:** 50,000 KVA power to be serviced from GESCOM.

**Water :** 0.069 TMC of water to be; metout of water collected in Narayana Devarakere during over flow from T.B. Dam. The Water Resources Department agreed and informed that an order will be issued in this regard at the earliest. The Company shall adopt rain water harvesting and water recycling.

**Incentivies and Concessions:** As per New Industrial Policy 2006-2011.

**Environment:** The promoters shall obtain CFE from KSPCB & ECC from GOI. No civil works shall commence prior to obtaining ECC.

**Others:**

- The promoter shall take all statutory and other necessary clearances and shall submit milestones/progress in implementation of the project regularly, which will be monitored by the Departments concerned.

  This approval is valid for a period of two years from the date of issue.

By Order and in the name of the President of India,

**B.R. NAGABHUSHANA**

P.R. 683

Desk Officer (Technical Cell)

Commerce & Industries Department

**HORTICULTURE SECRETARIAT**

**Sub :** Implementation of Centrally-Assisted Coconut Development Programmes -Reg

**Read :** 1. CDB letter No. 597/2007/Dev (Kar) dated 13.3.2008.

**Preamble:**

1. Karnataka State has an area of 3.85 lakh ha under coconut with an annual production of 1209 million nuts. Most of the coconut farmers are small and marginal farmers who are dependent on coconut crop for their livehood. Average size of holdings of coconut crop cultivation is around 0.2 to 2 ha.

2. Major pests and diseases such as coconut mite, black-headed caterpillar, red palm weevil, wilt, gyanoderma etc., infest coconut crop causing major loss to the farmers. In addition, recurring droughts affect the rain-fed coconut crop in maiden areas of the State resulting in distress to farmers.

3. Coconut Development Board has been providing 100% Central assistance for production and processing development of coconut crop. Under this scheme, for increasing productivity of coconut palms, farmers are being provided Rs 35,000 per ha, over a period of 2 years at the rate of Rs. 17,500 per ha. per year. Central Government funds are given to Department of Horticulture directly by the Coconut Development Board through demand drafts drawn in favor of Secretary, Horticulture.

4. Coconut mite is a major pest on coconut, which spreads through wind very fast in major coconut growing States of Southern parts of India causing loss of production and loss of revenue to the farmers. Coconut Development Board provides funds with instructions to utilize the same in specific villages. This is done based on the experience of positive results of laying out demonstrations by the Coconut Development Board in villages of Tiptur taluk. But selection of villages in the present system is done by Zilla Panchayats.

5. On 5.10.07 during the meeting of the State Level Monitoring Committee to review the progress of Coconut Development Board programmes, the Chairman, Coconut Development Board, Kochi has instructed the implementing agency to take up the Coconut Development Board assisted programmes on a cluster area approach in order to contain the mite infestation.

6. CDB in its letter read above has informed that the Karnataka's productivity in coconut is the lowest in the Country. The CDB has acceded to repeated requests of the Department of Horticulture for additional funds, from time to time. One of the important conditions imposed by CDB is that the scheme should be implemented on a cluster area basis in contiguous areas in important coconut growing districts. But this condition of CDB is being followed in a very ad-hoc manner. This is not creating any impact, Thus defeating the very purpose of the scheme. The Board has made it clear that it would be constrained to stop further funds to the State Department from 2008-09, if the guidelines of cluster basis are not followed during the implementation of the scheme. In addition to this, if cluster norms were not followed, the funds would not be distributed uniformaly in the coconut growing districts. Hence, in order to continue to assist the State Government, Coconut Development Board has sought remedial action.

8. This has been examined by the State Government and in view of the nature of the scheme and to achieve its greater utility at large, it was decided to issue orders as below;

**Government Order No. AHD 145 HPP 2007, Bangalore, Dated:25th April 2008**

1. Government is pleased to transfer the Coconut Development Board assisted programmes from District Sector to the State Sector.

2. The programme will be co-terminus with the 11th Plan period and there after the necessity to continue this scheme in the State Sector would be reviewed by the Horticulture Department.

3. The Director of Horticulture is directed to work out the details regarding the accounting system, which will be finalized in consultation with the Finance Department.

4. This order comes into immediate effect.

By Order and in the name of the President of India,

**S. RAJU**

Under Secretary to Government

Horticulture Department

P.R. 685

**Sub :** Oil Palm Development in Karnataka-Reconstitution of the Project Management Committee-reg.

**Ref :** 1) G.O. No. AHD 251 HPP 2002 dated :29.4.2003.

2) Letters of Director of Horticulture No.ತೋಇ/ತೋಅನಿ/ತಾಬೆ/ಸತೋಅ2/95/07–08 dated:14.1.2008 and 4.3.2008

**Preamble:**

A Project Management Committee was constituted to monitor the Oil Palm Development programme of Government of India under ISOPOM vide Government Order read at (1) above.

The Director of Horticulture vide his letters read at (2) above, has submitted a proposal to re-constitute the Project Management Committee by deleting Senior Processing Technologists (TMOP), New Delhi from the committee as the post of Senior processing Technologists (TMOP), no longer exists. A decision has been taken to this effect in the Project Management Committee (PMC) meeting held on 24.11.2007.

Hence, this order.

**Government Order No. AHD 16 HPP 2008, Bangalore Dated:9th April 2008.**

Government is pleased to re-constitute the project Management Committee to monitor the Oil Palm Development programmes of Government of India under ISOPOM with the following composition.

| | | |
|---|---|---|
| 1 | Secretary to Government,<br>Horticulture Department | Chairman |
| 2 | Joint Secretary,<br>TMOP, Ministry of Agriculture,<br>Dept. of Agriculture & Cooperation,<br>New Delhi. | Member |
| 3 | Secretary to Government,<br>Budget and Resources,<br>Finance Department | Member |
| 4 | Director,<br>Project Formulation Division<br>Planning Department | Member |
| 5 | Director,<br>Horticulture Department | Member |

| | | |
|---|---|---|
| 6 | Director,<br>National Research Centre for Oil Palm, Pedavegi,<br>Andhra Pradesh | Member |
| 7 | Additional Director of Horticulture, (Oil Palm), Lalbagh, Bangalore | Member-Secretary |

The responsibilities assigned and powers delegated to the Project Management Committee, remain the same as per Government Order read at (1) above. This comes into force with immediate effect.

By Order and in the name of the President of India,

P.R. 686

**S. RAJU**
Under Secretary to Government
Horticulture Department

**ಕಂದಾಯ ಸಚಿವಾಲಯ**

**ವಿಷಯ:** ಭಾರತ ಸರ್ಕಾರವು ರೂಪಿಸಿರುವ ಆಮ್ ಆದ್ಮಿ (ಜನಶ್ರೀ) ವಿಮಾ ಯೋಜನೆಯನ್ನು ರಾಜ್ಯದಲ್ಲಿ ಜಾರಿಗೆ ತರುವ ಬಗ್ಗೆ.

**ಓದಲಾಗಿದೆ:**
1. ಸನ್ಮಾನ್ಯ ಕೇಂದ್ರ ಆರ್ಥಿಕ ಸಚಿವರು 2007–08ನೇ ಕೇಂದ್ರೀಯ ಆಯವ್ಯಯದಲ್ಲಿ ತಿಳಿಸಿರುವಂತೆ ಹಾಗೂ ಕೇಂದ್ರ ಮಂತ್ರಾಲಯದ ಪತ್ರ ಸಂಖ್ಯೆ:ಡಿ.ಒ.ನಂ. ಎಸ್–13011/01–2007–ಐ.ಎನ್.ಎಸ್./III ದಿನಾಂಕ:27–4–2007.
2 ಪತ್ರ ಸಂಖ್ಯೆ 513011/2/07 ಐ.ಎನ್.ಎಸ್. III ದಿ:13.7.2007
3 ಪತ್ರ ಸಂಖ್ಯೆ ಎಫ್.ಡಿ. 216–ವೆಚ್ಚ–5/08, ದಿ:21.2.2008
4 ಎಫ್.ಡಿ. 21 ಕಾವಿಇ 08, ದಿನಾಂಕ:19.3.2008

**ಪ್ರಸ್ತಾವನೆ:**

ಓದಲಾದ (1)ರ ಪತ್ರದ ಸೂಚನೆಯಂತೆ ಭಾರತ ಸರ್ಕಾರದ ಆರ್ಥಿಕ ಮಂತ್ರಿಗಳು 2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಆಮ್ ಆದ್ಮಿ ಯೋಜನೆಯನ್ನು ಜಾರಿಗೆ ತರುವ ಬಗ್ಗೆ ಘೋಷಿಸಿದ್ದು ಈ ಮೇಲೆ ಓದಲಾದ (2)ರ ಪತ್ರದಂತೆ ಭಾರತ ಸರ್ಕಾರದ ಆರ್ಥಿಕ ಮಂತ್ರಾಲಯದ ಆರ್ಥಿಕ ಸೇವೆಗಳ ಇಲಾಖೆಯ (ವಿಮಾ ವಿಭಾಗ) ಇವರು ಈ ಯೋಜನೆಯ ಸಂಬಂಧ ಮಾದರಿ ನಿಯಮಗಳನ್ನು ರೂಪಿಸಲಾಗಿದ್ದು, ಇದರ ಅನ್ವಯ ಗ್ರಾಮೀಣ ಭೂ ರಹಿತ 18 ರಿಂದ 59 ವರ್ಷದೊಳಗಿನ ಕುಟುಂಬದ ಮುಖ್ಯಸ್ಥನ ಮರಣ ಹೊಂದಿದಲ್ಲಿ ರೂ. 30000/–, ಅಪಘಾತಕ್ಕೆ ಒಳಗಾಗಿ ಮರಣ ಹೊಂದಿದ ಸಂದರ್ಭದಲ್ಲಿ ರೂ. 75000/–ಶಾಶ್ವತ ಅಂಗವಿಕಲತೆ ಉಂಟಾದಲ್ಲಿ (2ಕಣ್ಣು ಅಥವಾ 2 ಅವಯವಗಳು (ಕೈಕಾಲುಗಳು) ಅಥವಾ ಒಂದು ಕಣ್ಣು ಮತ್ತು ಒಂದು ಅವಯವ) ರೂ. 75000/– ಗಳು ಹಾಗೂ ಭಾಗಶಃ ಅಂಗವಿಕಲತೆ ಉಂಟಾದಲ್ಲಿ (ಒಂದು ಕಣ್ಣು ಅಥವಾ ಒಂದು ಅವಯವ) ರೂ. 37500/–ಗಳ ಪರಿಹಾರ ನೀಡಲು ಉದ್ದೇಶಿಸಲಾಗಿದೆ.

ಓದಲಾದ (3) ರ ಪತ್ರದಲ್ಲಿ ಕರ್ನಾಟಕ ಸರ್ಕಾರದ ಆರ್ಥಿಕ ಇಲಾಖೆಯವರು ಈ ಯೋಜನೆಯನ್ನು ಭಾರತೀಯ ಜೀವವಿಮಾ ನಿಗಮದ ಮೂಲಕ ಜಾರಿಗೆ ತರುವ ಬಗ್ಗೆ ಸಹಮತಿಸಿರುತ್ತಾರೆ.

ಈ ಯೋಜನೆಗೆ ಪ್ರತಿ ಕುಟುಂಬದ ಮುಖ್ಯಸ್ಥನಿಗೆ ರೂ. 200 ರಂತೆ, 50% ರಷ್ಟು ವಿಮಾ ಕಂತನ್ನು ಕೇಂದ್ರ ಸರ್ಕಾರವು ಉಳಿದ 50% ಅನ್ನು ರಾಜ್ಯ ಸರ್ಕಾರವು ಭರಿಸುವುದು.

ಭಾರತ ಸರ್ಕಾರವು ಪ್ರಸ್ತಾಪಿಸಿರುವ ಆಮ್ ಆದ್ಮಿ ವಿಮಾ ಯೋಜನೆಯು ದಿನಾಂಕ: 1.7.2008 ರಿಂದ ಜಾರಿಗೆ ತರಲಾಗುತ್ತದೆ. ಈ ಯೋಜನೆಯ ವಿವರಗಳು ಕೆಳಕಂಡಂತಿವೆ:

1) ಅರ್ಹತೆ: ಗ್ರಾಮೀಣ ಭೂ ರಹಿತ ಕುಟುಂಬಗಳು
2) ವಯೋಮಿತಿ: 18 ರಿಂದ 59 ವರ್ಷ.
3) ವಿಮಾ ಕಂತು: ರೂ. 200.00 ಪ್ರತಿ ಕುಟುಂಬದ ಮುಖ್ಯಸ್ಥರಿಗೆ
ರೂ. 100.00 ರಾಜ್ಯ ಸರ್ಕಾರ ಮತ್ತು ಉಳಿದ ರೂ. 100.00 ಕೇಂದ್ರ ಸರ್ಕಾರ ಭರಿಸುತ್ತದೆ.

4) ಲಾಭಗಳು: 1) ನೈಸರ್ಗಿಕ ಸಾವು ರೂ. 30000/–
2) ಆಕಸ್ಮಿಕ ಸಾವು: ರೂ 75000/–
3) ಶಾಶ್ವತ ಅಂಗವಿಕಲತೆ: ರೂ. 75000/–
4) ಭಾಗಶಃ ಅಂಗವಿಕಲತೆ: ರೂ 37500/–
5) ವಿದ್ಯಾರ್ಥಿವೇತನ: 2 ಮಕ್ಕಳಿಗೆ ಸೀಮಿತ 9 ರಿಂದ 12ನೇ ತರಗತಿಯವರೆಗೆ ಮಾತ್ರ ಪ್ರತಿ 3 ತಿಂಗಳಿಗೆ ರೂ. 300.00 ಪ್ರತಿ ವಿದ್ಯಾರ್ಥಿಗೆ

ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಗ್ರಾಮೀಣ ಭೂ ರಹಿತ ಕುಟುಂಬಗಳ ಬಗ್ಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರು ಸರ್ವೆ ಮಾಡಿ ಪಟ್ಟಿಯನ್ನು ಸಿದ್ದಪಡಿಸಿರುತ್ತಾರೆ. ಈ ಪಟ್ಟಿಯನ್ನೇ ಯೋಜನೆಗಾಗಿ ಬಳಸಲು ಉದ್ದೇಶಿಸಲಾಗಿದೆ.

ರಾಜ್ಯ ಸರ್ಕಾರವು ಯೋಜನೆಯ ಅನುಷ್ಠಾನದ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿದೆ. ಯೋಜನೆಯ ಅನುಷ್ಠಾನದಿಂದ ಸಾರ್ವಜನಿಕರಿಗೆ ಬಹಳ ಅನುಕೂಲವಾಗುವುದರಿಂದ, ಈ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಕಂದಾಯ ಇಲಾಖೆ ಉದ್ದೇಶಿಸಿರುವುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರ ಆದೇಶ ಸಂಖ್ಯೆ:ಕಂಇ 25 ಡಿಎಸ್‌ಪಿ 2008 ಬೆಂಗಳೂರು, ದಿನಾಂಕ:31ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸುವ ಹಿನ್ನಲೆಯಲ್ಲಿ ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಆಮ್ ಆದ್ಮಿ ವಿಮಾ ಯೋಜನೆಯನ್ನು ಕರ್ನಾಟಕ ಸರ್ಕಾರವು ಒಟ್ಟಾರೆಯಾಗಿ ದಿನಾಂಕ:1–7–08 ರಿಂದ ಜಾರಿಗೆ ತರಲು ಆದೇಶಿಸಿದೆ. ಈ ಯೋಜನೆಯ ಅನುಷ್ಠಾನದ ಬಗ್ಗೆ ಸೂಕ್ತ ಮಾರ್ಗ ಸೂಚಿಗಳನ್ನು ಮತ್ತು ಹಣಕಾಸಿನ ನೆರವಿನ ಬಗ್ಗೆ ಪ್ರತ್ಯೇಕವಾಗಿ ಸ್ಪಷ್ಟ ಆದೇಶವನ್ನು ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ FD 628 Exp 5/08, ದಿನಾಂಕ:31–3–2008ರ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 670

**ಎಸ್. ಕಾತ್ಯಾಯಿನಿದೇವಿ**
ಪೀಠಾಧಿಕಾರಿ,
ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ,
ಕಂದಾಯ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಜಂಟಿ ಇಲಾಖಾ ವಿಚಾರಣೆ–ಡಾ ಆರ್. ಶ್ರೀನಾಥ್, ಪ್ರಾಧ್ಯಾಪಕರು (ನಿವೃತ್ತ) ಮತ್ತು ಇತರ ಹನ್ನೊಂದು ಅಧಿಕಾರಿ:ನೌಕರರು–ಮೈಸೂರು ವೈದ್ಯಕೀಯ ಕಾಲೇಜು ಅಂತಿಮ ಆದೇಶ.

**ಓದಲಾಗಿದೆ:** 1. ಪತ್ರ ಸಂಖ್ಯೆ:ಸಾದೂವಿ:ವೈಶಿ:74:2001–02, ದಿನಾಂಕ:25–6–2002
2 ಸರ್ಕಾರದ ಆದೇಶ ಸಂಖ್ಯೆ:ಆಕುಕ 35 ಎಂಎಂಸಿ 2002, ದಿನಾಂಕ: 12.6.2003
3 ಪತ್ರ ಸಂಖ್ಯೆ:LOK :ARE–2 ENQ–1:2003–04(Rule–11), ದಿನಾಂಕ:13.3.2008

**ಪ್ರಸ್ತಾವನೆ:**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಡಾ: ಆರ್. ಶ್ರೀನಾಥ್, ಪ್ರಾಧ್ಯಾಪಕರು ಹಾಗೂ ವಿಭಾಗ ಮುಖ್ಯಸ್ಥರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ಎಂ.ಎ. ಷರೀಫ್, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ: ಶಿವಾನಂದ ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ವಿ.ವೈ. ಶ್ರೀನಿವಾಸ, ಉಪನ್ಯಾಸಕರು, ಅರವಳಿಕೆ ಶಾಸ್ತ್ರ ವಿಭಾಗ, ಡಾ: ಎಸ್ ನವೀನ್, ಸ್ನಾತಕೋತ್ತರ ವಿದ್ಯಾರ್ಥಿ, ಶಸ್ತ್ರ ಚಿಕಿತ್ಸಾ ವಿಭಾಗ, ಆರ್. ರಾಮಯ್ಯ, ಕ್ಷ–ಕಿರಣ ತಂತ್ರಜ್ಞ, ಶ್ರೀಮತಿ ಶಿವಮ್ಮ, ಶುಶ್ರೂಷಕಿ, ಶ್ರೀಮತಿ ಪಿ. ಲಕ್ಷ್ಮೀದೇವಿ, ಶುಶ್ರೂಷಕಿ, ಶ್ರೀಮತಿ ವಿ. ಪುಟ್ಟಮ್ಮಣ್ಣಿ, ಶುಶ್ರೂಷಕಿ, ಶ್ರೀಮತಿ ಹೆಚ್.ಪಿ. ಲಿಲ್ಲಿ, ಶುಶ್ರೂಷಕಿ, ಶ್ರೀಮತಿ ಟಿ.ಎಸ್. ಕಮಲಾಕ್ಷಿ, ಶುಶ್ರೂಷಕಿ ಮತ್ತು ಶ್ರೀಮತಿ ಎಂ.ಜಿ. ವಿನುತಾ ಶುಶ್ರೂಷಕಿ ಮೈಸೂರು ವೈದ್ಯಕೀಯ ಕಾಲೇಜು:ಕೆ.ಆರ್. ಆಸ್ಪತ್ರೆ, ಮೈಸೂರು ರವರು ಎಸಗಿರುವರೆನ್ನಲಾದ ಕರ್ತವ್ಯ ಲೋಪದ ಬಗ್ಗೆ ಕರಡು ದೋಷಾರೋಪಣ ಪಟ್ಟಿಯನ್ನು ಸಲ್ಲಿಸುತ್ತಾ ಇಲಾಖಾ ವಿಚಾರಣೆಯನ್ನು ಜರುಗಿಸಲು ಸರ್ಕಾರವನ್ನು ಕೋರಿದ್ದರು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ:ಆರ್. ಶ್ರೀನಾಥ್, ಪ್ರಾಧ್ಯಾಪಕರು ಹಾಗೂ ವಿಭಾಗ ಮುಖ್ಯಸ್ಥರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ಎಂ.ಎ. ಷರೀಫ್, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ಶಿವಾನಂದ,

ಸಹಾಯಕ ಪ್ರಾಧ್ಯಾಪಕರು ಶಸ್ತ್ರ ಚಿಕಿತ್ಸಾ ವಿಭಾಗ, ಡಾ: ವಿ.ವೈ. ಶ್ರೀನಿವಾಸ, ಉಪನ್ಯಾಸಕರು, ಅರವಳಿಕೆ ಶಾಸ್ತ್ರ ವಿಭಾಗ, ಆರ್. ರಾಮಯ್ಯ ಕ್ಷ–ಕಿರಣ ತಂತ್ರಜ್ಞ, ಶ್ರೀಮತಿ ಶಿವಮ್ಮ, ಶುಶ್ರೂಷಕಿ, ಶ್ರೀಮತಿ ಪಿ. ಲಕ್ಷ್ಮೀದೇವಿ ಶುಶ್ರೂಷಕಿ, ಶ್ರೀಮತಿ ವಿ. ಪುಟ್ಟಮ್ಮಣ್ಣಿ, ಶುಶ್ರೂಷಕಿ, ಶ್ರೀಮತಿ ಹೆಚ್.ಪಿ. ಲಿಲ್ಲಿ, ಶುಶ್ರೂಷಕಿ, ಶ್ರೀಮತಿ, ಟಿ.ಎಸ್. ಕಮಲಾಕ್ಷಿ ಶುಶ್ರೂಷಕಿ ಮತ್ತು ಶ್ರೀಮತಿ ಎಂ.ಜಿ. ವಿನುತಾ, ಶುಶ್ರೂಷಕಿ, ಮೈಸೂರು ವೈದ್ಯಕೀಯ ಕಾಲೇಜು, ಕೆ.ಆರ್. ಆಸ್ಪತ್ರೆ, ಮೈಸೂರುರವರ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತದ ಅಡಿಷನಲ್ ರಿಜಿಸ್ಟ್ರಾರ್ ಆಫ್ ಎನ್‌ಕ್ವೈರೀಸ್ (2) ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಅಡಿಷನಲ್ ರಿಜಿಸ್ಟ್ರಾರ್ ಆಫ್ ಎನ್‌ಕ್ವೈರೀಸ್ (2), ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಡಾ:ಆರ್. ಶ್ರೀನಾಥ್, ಪ್ರಾಧ್ಯಾಪಕರು ಹಾಗೂ ವಿಭಾಗ ಮುಖ್ಯಸ್ಥರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ: ಎಂ.ಎ. ಷರೀಫ್, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ ಡಾ: ಶಿವಾನಂದ ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ವಿ.ವೈ. ಶ್ರೀನಿವಾಸ, ಉಪನ್ಯಾಸಕರು, ಅರವಳಿಕೆ ಶಾಸ್ತ್ರ ವಿಭಾಗ, ಆರ್. ರಾಮಯ್ಯ, ಕ್ಷ–ಕಿರಣ ತಂತ್ರಜ್ಞ, ಶ್ರೀಮತಿ ಶಿವಮ್ಮ, ಶುಶ್ರೂಷಕಿ, ಶ್ರೀಮತಿ ಪಿ. ಲಕ್ಷ್ಮೀದೇವಿ, ಶುಶ್ರೂಷಕಿ, ಶ್ರೀಮತಿ ವಿ. ಪುಟ್ಟಮಣ್ಣಿ, ಶುಶ್ರೂಷಕಿ, ಶ್ರೀಮತಿ ಹೆಚ್.ಪಿ. ಲಿಲ್ಲಿ, ಶುಶ್ರೂಷಕಿ, ಶ್ರೀಮತಿ ಟಿ.ಎಸ್. ಕಮಲಾಕ್ಷಿ, ಶುಶ್ರೂಷಕಿ ಮತ್ತು ಶ್ರೀಮತಿ ಎಂ.ಜಿ. ವಿನುತಾ, ಶುಶ್ರೂಷಕಿ ಮೈಸೂರು ವೈದ್ಯಕೀಯ ಕಾಲೇಜು: ಕೆ.ಆರ್. ಆಸ್ಪತ್ರೆ, ಮೈಸೂರುವರವರ ವಿರುದ್ಧದ ಆರೋಪಗಳ ಬಗೆಗಿನ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯು ಹನ್ನೊಂದು ಆಪಾದಿತ ಸರ್ಕಾರಿ ಅಧಿಕಾರಿ:ನೌಕರರ ವಿರುದ್ಧದ ಆರೋಪಗಳನ್ನು ಸಾಬೀತುಪಡಿಸಲು ಶಿಸ್ತು ಪ್ರಾಧಿಕಾರವು ವಿಫಲವಾಗಿದೆಯೆಂದು ಕಂಡುಕೊಂಡಿರುತ್ತಾರೆ.

ವಿಷಯಕ್ಕೆ ಸಂಬಂಧಿಸಿದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಆಪಾದಿತ ಸರ್ಕಾರಿ ಅಧಿಕಾರಿ:ನೌಕರರಾದ ಡಾ:ಆರ್. ಶ್ರೀನಾಥ್ ಪ್ರಾಧ್ಯಾಪಕರು ಹಾಗೂ ವಿಭಾಗ ಮುಖ್ಯಸ್ಥರು (ನಿವೃತ್ತ) ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ಎಂ.ಎ. ಷರೀಫ್, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ಶಿವಾನಂದ ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ವಿ ವೈ. ಶ್ರೀನಿವಾಸ, ಉಪನ್ಯಾಸಕರು, ಅರವಳಿಕೆ ಶಾಸ್ತ್ರ ವಿಭಾಗ, ಆರ್. ರಾಮಯ್ಯ ಕ್ಷ–ಕಿರಣ ತಂತ್ರಜ್ಞ (ನಿವೃತ್ತ) ಶ್ರೀಮತಿ ಶಿವಮ್ಮ, ಶುಶ್ರೂಷಕಿ, ಶ್ರೀಮತಿ ಪಿ. ಲಕ್ಷ್ಮೀದೇವಿ ಶುಶ್ರೂಷಕಿ, ಶ್ರೀಮತಿ ವಿ. ಪುಟ್ಟಮ್ಮಣ್ಣಿ, ಶುಶ್ರೂಷಕಿ, ಶ್ರೀಮತಿ ಹೆಚ್.ಪಿ. ಲಿಲ್ಲಿ, ಶುಶ್ರೂಷಕಿ, ಶ್ರೀಮತಿ ಟಿ.ಎಸ್. ಕಮಲಾಕ್ಷಿ ಶುಶ್ರೂಷಕಿ ಮತ್ತು ಶ್ರೀಮತಿ ಎಂ.ಜಿ. ವಿನುತಾ, ಶುಶ್ರೂಷಕಿ, ಮೈಸೂರು ವೈದ್ಯಕೀಯ ಕಾಲೇಜು:ಕೆ.ಆರ್. ಆಸ್ಪತ್ರೆ, ಮೈಸೂರುರವರ ವಿರುದ್ಧದ ಆರೋಪಗಳ ಬಗೆಗಿನ ವಿಚಾರಣಾಧಿಕಾರಿಯ ವರದಿಯನ್ನು ಒಪ್ಪಿ ಅವರನ್ನು ದೋಷಮುಕ್ತರನ್ನಾಗಿ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 86 ಎಂಎಂಇ 2006, ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 2008**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214A (1) ಮತ್ತು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ, ನಿಯಮ 13ರೊಂದಿಗೆ ಓದಿಕೊಂಡ ನಿಯಮ 11ಎ ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿ:ನೌಕರರಾದ ಡಾ: ಆರ್. ಶ್ರೀನಾಥ್, ಪ್ರಾಧ್ಯಾಪಕರು ಹಾಗೂ ವಿಭಾಗ ಮುಖ್ಯಸ್ಥರು (ನಿವೃತ್ತ), ಶಸ್ತ್ರ ಚಿಕಿತ್ಸಾ ವಿಭಾಗ ಡಾ: ಎಂ.ಎ.ಷರೀಫ್, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ಶಿವಾನಂದ, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಡಾ:ವಿ.ವೈ. ಶ್ರೀನಿವಾಸ, ಉಪನ್ಯಾಸಕರು, ಅರವಳಿಕೆ ಶಾಸ್ತ್ರ ವಿಭಾಗ, ಆರ್, ರಾಮಯ್ಯ, ಕ್ಷ–ಕಿರಣ ತಂತ್ರಜ್ಞ (ನಿವೃತ್ತ), ಶ್ರೀಮತಿ, ಶಿವಮ್ಮ ಶುಶ್ರೂಷಕಿ ಶ್ರೀಮತಿ, ಪಿ. ಲಕ್ಷ್ಮೀದೇವಿ, ಶುಶ್ರೂಷಕಿ, ಶ್ರೀಮತಿ ವಿ. ಪುಟ್ಟಮ್ಮಣ್ಣಿ, ಶುಶ್ರೂಷಕಿ, ಶ್ರೀಮತಿ ಹೆಚ್.ಪಿ. ಲಿಲ್ಲಿ, ಶುಶ್ರೂಷಕಿ, ಶ್ರೀಮತಿ ಟಿ.ಎಸ್. ಕಮಲಾಕ್ಷಿ ಶುಶ್ರೂಷಕಿ ಮತ್ತು ಶ್ರೀಮತಿ ಎಂ.ಜಿ. ವಿನುತಾ, ಶುಶ್ರೂಷಕಿ, ಮೈಸೂರು, ವೈದ್ಯಕೀಯ ಕಾಲೇಜು:ಕೆ.ಆರ್. ಆಸ್ಪತ್ರೆ, ಮೈಸೂರುರವರ ವಿರುದ್ಧದ ಆರೋಪಗಳನ್ನು ಕೈಬಿಟ್ಟು ದೋಷಮುಕ್ತರನ್ನಾಗಿ ಮಾಡಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 671

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಪಾನೀಯ ನಿಗಮ ನಿಯಮಿತ ಹುದ್ದೆಯನ್ನು ಅಪರ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವೃಂದಕ್ಕೆ ತಾತ್ಕಾಲಿಕ ಸೇರ್ಪಡೆ (ಟೆಂಪರರಿ ಎನ್‌ಕೇಡರ್) ಮಾಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 11 ಸೇಇಮು 2006 ದಿನಾಂಕ:3–7–2007.

2 ಮಹಾಲೇಖಪಾಲರು, ಕರ್ನಾಟಕ ಇವರ ಪತ್ರ ಸಂಖ್ಯೆ:ಜಿಇ 5:ಎಜಿ3:ವಿವೋಎಲ್–1:07–08, 762–763, ದಿನಾಂಕ:13–8–2007.

3 ಮಹಾಲೇಖಪಾಲರ ಪತ್ರ ಸಂಖ್ಯೆ:ಜಿಇ 5:ಎಜಿ3;ವಿವೋ ಎಲ್–1:07–08:1400–01, ದಿನಾಂಕ:11–2–2008.

**ಪ್ರಸ್ತಾವನೆ:**

ಕ್ರ.ಸಂ. (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಸಿ. ವೀರಭದ್ರಯ್ಯ, ಜಂಟೀ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಅಪರ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಪದೋನ್ನತಿ ನೀಡಿ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಪಾನೀಯ ನಿಗಮ ನಿಯಮಿತ, ಬೆಂಗಳೂರು, ಈ ಹುದ್ದೆಗೆ ನೇಮಿಸಲಾಗಿದೆ. ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಮಹಾಲೇಖಪಾಲರು, ಇವರ ವೇತನವನ್ನು ನಿಗದಿಪಡಿಸಲು ಸದರಿ ಅಧಿಕಾರಿಗೆ ನೀಡಿರುವ ಪದೋನ್ನತಿಯನ್ನು ಕೆ.ಸಿ.ಎಸ್.ಆರ್. ನಿಯಮ 60 ರಡಿಯಲ್ಲಿ ಪರಿಗಣಿಸುವಂತೆ, ಕೋರಿರುತ್ತಾರೆ. ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ಮಹಾಲೇಖಪಾಲರು, ಸದರಿ ಅಧಿಕಾರಿಯು ಜಂಟೀ ನಿರ್ದೇಶಕರಾಗಿ ಕರ್ನಾಟಕ ಪಾನೀಯ ನಿಗಮ ನಿಯಮಿತದಲ್ಲೇ ಕೆಲಸ ನಿರ್ವಹಿಸಿದ್ದು, ಆ ಹುದ್ದೆಯನ್ನು ಮೇಲ್ದರ್ಜೆಗೇರಿಸಲಾಗಿದೆಯೇ ಮತ್ತು ವೃಂದ ಸೇರ್ಪಡೆ ಮಾಡಲಾಗಿದೆಯೇ ಎಂಬ ಬಗ್ಗೆ ತಿಳಿಸುವಂತೆ ಕೋರಿದ್ದಾರೆ. ಸರ್ಕಾರವು ಈ ಬಗ್ಗೆ ಪರಿಶೀಲಿಸಿದ್ದು, ಶ್ರೀ ಸಿ. ವೀರಭದ್ರಯ್ಯ ಅವರಿಗಿಂತ ಕಿರಿಯರಾರಿಗೂ ಅಪರ ನಿರ್ದೇಶಕ ಹುದ್ದೆಗೆ ಬಡ್ತಿ ನೀಡಿಲ್ಲ ಆದ್ದರಿಂದ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಪಾನೀಯ ನಿಗಮ ನಿಯಮಿತ, ಬೆಂಗಳೂರು, ಈ ಹುದ್ದೆಯನ್ನು ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಹುದ್ದೆಯ ವೃಂದಕ್ಕೆ ತಾತ್ಕಾಲಿಕ ಸೇರ್ಪಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 184 ಸೇಇಮು 2007, ಬೆಂಗಳೂರು, ದಿ:11ನೇ ಏಪ್ರಿಲ್ 2008**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ಪಾನೀಯ ನಿಗಮ ನಿಯಮಿತ, ಬೆಂಗಳೂರು, ಈ ಹುದ್ದೆಯನ್ನು ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಈ ವೃಂದಕ್ಕೆ ತಾತ್ಕಾಲಿಕ ಸೇರ್ಪಡೆ ಮಾಡಲಾಗಿದೆ. ಈ ಮೇಲ್ದರ್ಜೆ ಹುದ್ದೆಗೆ ಶ್ರೀ ಸಿ. ವೀರಭದ್ರಯ್ಯ ಇವರು ಪದೋನ್ನತಿ ಮೇಲೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಸದರಿ ಅಧಿಕಾರಿಯು ಈ ಹುದ್ದೆಯಲ್ಲಿ ಮುಂದುವರೆಯುವ ದಿನಾಂಕದವರೆಗೆ ತಾತ್ಕಾಲಿಕ ಸೇರ್ಪಡೆಯು ಈ ವೃಂದದಲ್ಲಿ ಮುಂದುವರೆದಿರುತ್ತದೆ. ಈ ಅಧಿಕಾರಿಯ ವೇತನವನ್ನು ನಿಯಮಾನುಸಾರ ಅವರು ಪದೋನ್ನತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ನಿಗದಿಪಡಿಸಲು ಆದೇಶಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 672

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

## ಸಹಕಾರ ಸಚಿವಾಲಯ

**ವಿಷಯ:** ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ 2005–06 ಮತ್ತು 2006–07ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಒ 208 ಸಿಎಲ್ ಎಂ 2008, ದಿನಾಂಕ:28–9–2007.

2 ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ ಉಪಾಧ್ಯಕ್ಷರ ಪತ್ರದ ಸಂಖ್ಯೆ:ವಿಹೆಚ್ ಬಿಸಿಎಸ್‌ಎಲ್ /726/07–08 ದಿನಾಂಕ:22–2–2008

**ಪ್ರಸ್ತಾವನೆ:**

ಮೇಲೆ ಓದಲಾದ 1 ರ ಸರ್ಕಾರದ ಆದೇಶದಲ್ಲಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ 2005–06, ಮತ್ತು 2006–07ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ದಿನಾಂಕ: 31–3–2008ರೊಳಗೆ ನಡೆಸಬೇಕೆಂದು ಅನುಮತಿ ನೀಡಲಾಗಿದೆ. ಮುಂದುವರೆದು ಸಂಘವು ಬೆಂಗಳೂರು ಉತ್ತರ ತಾಲ್ಲೂಕಿನಲ್ಲಿ 208 ಎಕರೆ ಭೂಮಿಯನ್ನು ಕಳೆದುಕೊಂಡಿದ್ದು ರಿಟ್ ಅರ್ಜಿ ಸಂಖ್ಯೆ: 13852–57/99ರಲ್ಲಿ ಶ್ರೇಷ್ಠ ನ್ಯಾಯಾಲಯವು ದಿನಾಂಕ:28–5–2001 ರಂದು ಸಂಘಕ್ಕೆ ಪರ್ಯಾಯ ಭೂಮಿಯನ್ನು ಒದಗಿಸುವಂತೆ ಕಂದಾಯ ಇಲಾಖೆಗೆ ನಿರ್ದೇಶನ ನೀಡಿದ್ದು ಇದುವರೆಗೆ ಸರ್ಕಾರದಿಂದ ಯಾವುದೇ ಕ್ರಮ ಕೈಗೊಂಡಿಲ್ಲವೆಂದೂ ವಾರ್ಷಿಕ ಮಹಾಸಭೆಯನ್ನು ನಡೆಸಲು ಕನಿಷ್ಠ ರೂ 1.00 ಲಕ್ಷಗಳ ಅಗತ್ಯವಿದ್ದು ಸದರಿ ಹಣವನ್ನು ಸದ್ಯದ ಪರಿಸ್ಥಿತಿಯಲ್ಲಿ ಸಂಘವು ಭರಿಸಲು ಆಗುವುದಿಲ್ಲವೆಂದು ತಿಳಿಸಿ 2005–06 ಮತ್ತು 2006–07 ಸಾಲುಗಳ ಮಹಾಸಭೆಗಳನ್ನು ನಡೆಸಲು ದಿನಾಂಕ:30–9–08 ರವರೆಗೆ ಕಾಲಾವಕಾಶವನ್ನು ನೀಡಿ ಅನುಮತಿ ನೀಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ವೈಯಾಲಿಕಾವಲ್ ಗೃಹನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ ಉಪಾಧ್ಯಕ್ಷರು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಓ 43 ಸಿಎಲ್ಎಮ್ 2008, ಬೆಂಗಳೂರು, ದಿನಾಂಕ:5ನೇ ಏಪ್ರಿಲ್ 2008**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ 2005–06, ಮತ್ತು 2006–07ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:15.5.2008 ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ(1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ 2005–06ನೇ ಸಾಲಿಗೆ ಸಂಬಂಧಪಟ್ಟಂತೆ "ಇಪ್ಪತ್ತು ತಿಂಗಳು" ಮತ್ತು 2006–07ನೇ ಸಾಲಿಗೆ ಸಂಬಂಧಪಟ್ಟಂತೆ "ಎಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 1. 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:15–5–2008ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 673

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ಲೋಪವೆಸಗಿರುವ ಪೊಲೀಸ್ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004, ದಿನಾಂಕ:23–1–2004 ಮತ್ತು 7–1–2005

2 ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004, ದಿನಾಂಕ:11–12–2006

3 ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು ರವರ ಅ.ಸ.ಪತ್ರ ಸಂಖ್ಯೆ:03–ಡಿಇ/ಎಡಿಇಪಿ/ಕಾರಾಗೃಹ/2007, ದಿನಾಂಕ:12–3–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕೆ.ಎಸ್.ಪಿ (ಡಿಪಿ) ನಿಯಮಗಳು, 1965ರ ನಿಯಮ 6 ಮತ್ತು 8ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು

(ನೇಮಕಾತಿ ಮತ್ತು ತರಬೇತಿ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು ತದನಂತರ ಸದರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಆದೇಶವನ್ನು ಭಾಗಶಃ ಮಾರ್ಪಡಿಸಿ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಟಿ. ರಮೇಶ್, ಐಪಿಎಸ್, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರು ಸದರಿ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ಶ್ರೀ ಬಿ. ದಯಾನಂದ್, ಐಪಿಎಸ್, ಪೊಲೀಸ್ ಉಪ ಮಹಾ ನಿರೀಕ್ಷಕರು, ಅಗ್ನಿಶಾಮಕ ಸೇವೆ, ಬೆಂಗಳೂರು ಇವರನ್ನು ಕೆ.ಎಸ್.ಪಿ (ಡಿಪಿ) ನಿಯಮಗಳು 1965ರ ನಿಯಮ 6(5)ರನ್ವಯ ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6(5)ರನ್ವಯ ಪೊಲೀಸ್ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿಕೊಳ್ಳುವ ಅಧಿಕಾರವು ಸರ್ಕಾರವು ನೇಮಿಸುವಂತಹ ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಗಳವರೆಗೆ ಪ್ರದತ್ತವಾಗಿದೆ. ಆದರೂ ಸಹ ವಿಚಾರಣಾಧಿಕಾರಿಗಳು ಕೋರಿರುವಂತೆ ಮಂಡನಾಧಿಕಾರಿಯನ್ನು ನೇಮಿಸುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004, ಬೆಂಗಳೂರು, ದಿನಾಂಕ:28ನೇ ಮಾರ್ಚ್ 2008**

ಪ್ರಸ್ತಾವನೆಯನ್ನು ಪರಿಶೀಲಿಸಿ ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯಾಗಿ ಶ್ರೀ ಬಿ. ದಯಾನಂದ್ ಐಪಿಎಸ್, ಪೊಲೀಸ್ ಉಪ ಮಹಾ ನಿರೀಕ್ಷಕರು, ಅಗ್ನಿಶಾಮಕ ಸೇವೆ, ಬೆಂಗಳೂರುರವರನ್ನು ನೇಮಿಸಿ ಆದೇಶಿಸಿದೆ.

ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 19 ಸೇಇವಿ 2001, ದಿನಾಂಕ:28–6–2001ರಲ್ಲಿ ಹೊರಡಿಸಿರುವ ಸೂಚನೆಗಳಂತೆ ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರ್ಣಗೊಳಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 674

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಚಿಕ್ಕಹೊನ್ನಪ್ಪ, ನಿವೃತ್ತ ತಹಶೀಲ್ದಾರ್, ಮತ್ತು ಇತರೆ ಸಿಬ್ಬಂದಿ ವರ್ಗದವರ ವಿರುದ್ಧ ಶಿಸ್ತುಕ್ರಮ– ಇಲಾಖಾ ವಿಚಾರಣೆಯಿಂದ ಕೈಬಿಡುವ ಕುರಿತು.

**ಓದಲಾಗಿದೆ:** 1. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಇವರ ಪತ್ರ ಸಂಖ್ಯೆ: ಸಿಸಿಎ, ಮಿಸ್ 140:07–08, ದಿನಾಂಕ:20–3–2008.

2 ಶ್ರೀ ಚಿಕ್ಕಹೊನ್ನಪ್ಪ, ನಿವೃತ್ತ ತಹಶೀಲ್ದಾರ್, ಮತ್ತು ಇತರೆ ಸಿಬ್ಬಂದಿ ವರ್ಗದವರ ಜಂಟಿ ಮನವಿ ದಿನಾಂಕ:3–4–2008.

**ಪ್ರಸ್ತಾವನೆ:**

ಶ್ರೀ ಟಿ.ಎಲ್. ನಾಗರಾಜ, ರಾಷ್ಟ್ರ ಯುವ ಪ್ರಶಸ್ತಿ ವಿಜೇತ, ಮಳವಳ್ಳಿ ತಾಲ್ಲೂಕು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:2–5–2007ರ ದೂರು ಅರ್ಜಿ ಕುರಿತು ಮೇಲೆ ಓದಲಾದ ಕ್ರಮಸಂಖ್ಯೆ (1), ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರುರವರು ಮಳವಳ್ಳಿ ತಾಲ್ಲೂಕಿನ ಗ್ರಾಮಲೆಕ್ಕಿಗರಾಗಿದ್ದ ಶ್ರೀ ವಿ. ಕೃಷ್ಣಶೆಟ್ಟಿ, ಇವರಿಗೆ ನಿಯಮಬಾಹಿರವಾಗಿ ಒಂದು ಹೆಚ್ಚುವರಿ ವೇತನಬಡ್ತಿ ಹಾಗೂ ಎರಡು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ಕಾರಣಕರ್ತರಾಗಿರುವ (1) ಶ್ರೀ ಎಂ.ಎಸ್. ಚಿಕ್ಕಹೊನ್ನಪ್ಪ (ನಿವೃತ್ತ ತಹಶೀಲ್ದಾರ್) (2) ಶ್ರೀ ಎಂ. ಮುತ್ತಯ್ಯ (ನಿವೃತ್ತ ಶಿರಸ್ತೇದಾರ್) (3) ಶ್ರೀ ಬಿ. ಮಾದಯ್ಯ, ಶಿರಸ್ತೇದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಮತ್ತು (4) ಶ್ರೀ ನಂದೀಶ್, ದ್ವಿತೀಯದರ್ಜೆ ಸಹಾಯಕ, ತಾಲ್ಲೂಕು ಕಛೇರಿ, ಮಳವಳ್ಳಿ ಇವರುಗಳ ವಿರುದ್ಧ ಶಿಸ್ತುಕ್ರಮ ಕೈಗೊಳ್ಳುವ ಸಂಬಂಧವಾಗಿ ಸಂಬಂಧಪಟ್ಟ ನೌಕರರ/ಅಧಿಕಾರಿಗಳ ವಿರುದ್ಧ ದೋಷಾರೋಪಣ ಪಟ್ಟಿ ತಯಾರಿಸಿ ಕಳುಹಿಸಿ ಕೊಡುತ್ತಾ ಸದರಿ ಪ್ರಕರಣದಲ್ಲಿ ತಹಶೀಲ್ದಾರ್ ವೃಂದದ ಒಬ್ಬ ಅಧಿಕಾರಿ ಹಾಗೂ ಇತರರು ಶಾಮೀಲಾಗಿದ್ದು ಈ ಪೈಕಿ ಶ್ರೀ ಎಂ.ಎಸ್. ಚಿಕ್ಕಹೊನ್ನಪ್ಪ ಮತ್ತು ಶ್ರೀ ಎಂ. ಮುತ್ತಯ್ಯರವರುಗಳು ಈಗಾಗಲೇ ಸೇವೆಯಿಂದ ನಿವೃತ್ತಿ ಹೊಂದಿರುತ್ತಾರೆ. ಈ ಅಧಿಕಾರಿ/ ನೌಕರರನ್ನೊಳಗೊಂಡಂತೆ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 1957ರ ಜಂಟಿ ಇಲಾಖಾ ವಿಚಾರಣೆ ಹೂಡಬೇಕಾಗುತ್ತದೆ. ನಿಯಮ 13ರ ಪ್ರಕಾರ ಸೇವೆಯಿಂದ ಈಗಾಗಲೇ ನಿವೃತ್ತರಾಗಿರುವ

ಅಧಿಕಾರಿ/ ನೌಕರರ ಬಗ್ಗೆ ಇಲಾಖಾ ವಿಚಾರಣೆ ಹೂಡಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರ ಮೇರೆಗೆ ಸರ್ಕಾರದ ಪೂರ್ವಾನುಮತಿ ಅಗತ್ಯವಿರುತ್ತದೆ. ಆದುದರಿಂದ, ಈ ಪ್ರಕರಣದಲ್ಲಿ ಭಾಗಿಯಾಗಿರುವ ಅಧಿಕಾರಿ/ನೌಕರರ ವಿರುದ್ದ ಇಲಾಖಾ ವಿಚಾರಣೆ ಹೂಡಲು ಸರ್ಕಾರದ ಅನುಮೋದನೆ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ದಿನಾಂಕ:3–4–2008ರಲ್ಲಿ ಶ್ರೀ ಚಿಕ್ಕಹೊನ್ನಪ್ಪ, ನಿವೃತ್ತ ತಹಶೀಲ್ದಾರ್, ಮತ್ತು ಇತರೆ ಸಿಬ್ಬಂದಿ ವರ್ಗದವರು ಜಂಟಿಯಾಗಿ ಮನವಿಯನ್ನು ಸರ್ಕಾರಕ್ಕೆ ಸಲ್ಲಿಸಿ ತಮ್ಮ ವಿರುದ್ಧ ಮಾಡಲಾದ ಆರೋಪದ ಕುರಿತು ಜಿಲ್ಲಾಧಿಕಾರಿಗಳು ಶ್ರೀ ವಿ. ಕೃಷ್ಣಶೆಟ್ಟಿ, ಗ್ರಾಮಲೆಕ್ಕಿಗರು ಇವರಿಗೆ ಮಂಜೂರು ಮಾಡಲಾದ ಹೆಚ್ಚುವರಿ ಬಡ್ತಿಯನ್ನು ರದ್ದುಪಡಿಸಿರುವುದರಿಂದ ಈ ಕುರಿತು ಮಾನ್ಯ ಕೆಎಟಿಯಲ್ಲಿ ಪ್ರಕರಣ ಬಾಕಿ ಇರುವುದಾಗಿ ತಿಳಿಸಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆ ಕುರಿತು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ವಿ.ಕೃಷ್ಣಶೆಟ್ಟಿ, ಗ್ರಾಮಲೆಕ್ಕಿಗರು, ಮಳವಳ್ಳಿ ತಾಲ್ಲೂಕು, ಇವರಿಗೆ ಒಂದು ಹೆಚ್ಚುವರಿ ಬಡ್ತಿ ಹಾಗೂ ಎರಡು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿರುವುದನ್ನು ಈಗಾಗಲೇ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರು ರದ್ದುಪಡಿಸಿರುತ್ತಾರೆ. ಈ ರೀತಿಯಾಗಿ ರದ್ದುಪಡಿಸಿದ ಆದೇಶದ ವಿರುದ್ದ ಶ್ರೀ ಕೃಷ್ಣಶೆಟ್ಟಿ, ಗ್ರಾಮಲೆಕ್ಕಾಧಿಕಾರಿಯವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಲಿಯಲ್ಲಿ ಅರ್ಜಿ ಸಲ್ಲಿಸಿದ್ದು, ಸದರಿ ಅರ್ಜಿಯು ಇನ್ನೂ ಆಡಳಿತ ನ್ಯಾಯಮಂಡಳಿಯಲ್ಲಿ ಇತ್ಯರ್ಥವಾಗದೇ ಬಾಕಿ ಇರುತ್ತದೆ. ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಸಂಭವಿಸಿಲ್ಲವೆಂದು ದೃಢಪಡಿಸಿಕೊಂಡು, ಈ ಪ್ರಕರಣದಲ್ಲಿ ಭಾಗಿಯಾಗಿರುವ (1) ಶ್ರೀ ಚಿಕ್ಕಹೊನ್ನಪ್ಪ, ನಿವೃತ್ತ ತಹಶೀಲ್ದಾರ್ (2) ಎಂ. ಮುತ್ತಯ್ಯ (ನಿವೃತ್ತ ಶಿರಸ್ತೇದಾರ್) (3) ಶ್ರೀ ಬಿ. ಮಾದಯ್ಯ, ಶಿರಸ್ತೇದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಮತ್ತು (4) ಶ್ರೀ ನಂದೀಶ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕಛೇರಿ, ಮಳವಳ್ಳಿ ಇವರುಗಳ ವಿರುದ್ಧ ಮಾಡಲಾದ ಆರೋಪವನ್ನು ಕೈಬಿಡಲು ಸರ್ಕಾರವು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ. 18 ಎಡಿಇ 2008, ಬೆಂಗಳೂರು, ದಿನಾಂಕ:26ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಹಾಗೂ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಸಂಭವಿಸಿರುವುದಿಲ್ಲದಿರುವುದನ್ನು ಮನಗಂಡು, ಸರ್ಕಾರವು ಈ ಪ್ರಕರಣದಲ್ಲಿ ಭಾಗಿಯಾಗಿರುವ (1) ಶ್ರೀ ಚಿಕ್ಕಹೊನ್ನಪ್ಪ, ನಿವೃತ್ತ ತಹಶೀಲ್ದಾರ್ (2) ಶ್ರೀ ಎಂ. ಮುತ್ತಯ್ಯ, ನಿವೃತ್ತ ಶಿರಸ್ತೇದಾರ್ (3) ಶ್ರೀ ಬಿ. ಮಾದಯ್ಯ, ಶಿರಸ್ತೇದಾರ್, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಮತ್ತು (4) ಶ್ರೀ ನಂದೀಶ್, ದ್ವಿತೀಯದರ್ಜೆ ಸಹಾಯಕ, ತಾಲ್ಲೂಕು ಕಛೇರಿ, ಮಂಡ್ಯ ಇವರುಗಳ ವಿರುದ್ದ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಈ ಪ್ರಕರಣದ ಮಟ್ಟಿಗೆ ಕೈಬಿಟ್ಟು ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 695

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಕಂಇ 40 ಮುಅಬಿ 2008, ಬೆಂಗಳೂರು, ದಿನಾಂಕ:24ನೇ ಏಪ್ರಿಲ್ 2008**

ಸರ್ಕಾರಿ ಆದೇಶ ಸಂಖ್ಯೆ:ಕಂಇ 264 ಮುಅಬಿ 2007 ದಿನಾಂಕ:18–3–2007ರ ಗುಲ್ಬರ್ಗಾ ಜಿಲ್ಲಾ ಅನುದಾನ ಪಟ್ಟಿಯ ಕ್ರಮ ಸಂಖ್ಯೆ:1ರಲ್ಲಿ "ಶ್ರೀ ಮರೆಮ್ಮ ದೇವಸ್ಥಾನ ಗೋಗಿ (ಕೆ) ಗ್ರಾಮ, ಶಹಾಪುರ ತಾಲ್ಲೂಕು" ಎಂಬ ಪದಗಳ ಬದಲಾಗಿ "ಶ್ರೀ ಮಾತೆ ಮರೆಮ್ಮ ದೇವಸ್ಥಾನ ಗೋಗಿ (ಕೆ) ಗ್ರಾಮ, ಶಹಾಪೂರ ತಾಲ್ಲೂಕು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 694

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಬಿ.ಆರ್. ಚಂದ್ರಶೇಖರ್, ಡಿವೈ.ಎಸ್.ಪಿ., ಶಿವಮೊಗ್ಗ ಉಪ ವಿಭಾಗ ಇವರ ವೇತನವನ್ನು ಅವರಿಗಿಂತ ಕಿರಿಯ ಅಧಿಕಾರಿಯಾಗಿರುವ ಶ್ರೀ ಎಸ್.ಬಿ. ಪಾಟೀಲ್, ಡಿವೈ.ಎಸ್.ಪಿ ರವರ ವೇತನಕ್ಕೆ ಸಮತೋಲನಗೊಳಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ಬೆಂಗಳೂರು ರವರ ಕಛೇರಿಯ ಪತ್ರ ಸಂಖ್ಯೆ:92/ಸಿಬ್ಬಂದಿ/ವೇ.ನಿ/2006–07 ದಿನಾಂಕ:12–6–2007.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಶ್ರೀ ಬಿ.ಆರ್. ಚಂದ್ರಶೇಖರ್, ಡಿವೈ.ಎಸ್.ಪಿ, ರವರು ಮನವಿ ಸಲ್ಲಿಸಿ ಅವರಿಗಿಂತ ಕಿರಿಯರಾಗಿರುವ ಶ್ರೀ ಎಸ್.ಬಿ. ಪಾಟೀಲ್, ಡಿವೈ.ಎಸ್.ಪಿ ರವರು ಅಧಿಕ ವೇತನ ಪಡೆಯುತ್ತಿರುವುದಾಗಿ ತಿಳಿಸುತ್ತಾ ಕಿರಿಯರ ವೇತನಕ್ಕೆ ಸಮತೋಲನಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಈ ಇಬ್ಬರು ಅಧಿಕಾರಿಗಳ ಸೇವಾ ಪುಸ್ತಕವನ್ನು ಪರಿಶೀಲಿಸಲಾಯಿತು. ಹಿರಿಯ ಅಧಿಕಾರಿಯಾದ ಶ್ರೀ ಬಿ.ಆರ್. ಚಂದ್ರಶೇಖರ್, ಡಿವೈ.ಎಸ್.ಪಿ., ರವರು ದಿನಾಂಕ:20–10–1975 ರಲ್ಲಿ ಪಿ.ಎಸ್.ಐ ಆಗಿ ನೇರ ನೇಮಕಾತಿ ಹೊಂದಿದ್ದು, ದಿನಾಂಕ:20–10–1985ಕ್ಕೆ ಪಿ.ಎಸ್.ಐ. ಹುದ್ದೆಯಲ್ಲಿ ಕಾಲಬದ್ಧ ವೇತನ ಪಡೆದು ತದನಂತರ ದಿನಾಂಕ:1–6–1991ಕ್ಕೆ ಸ್ವಯಂ ಚಾಲಿತ ವಿಶೇಷ ವೇತನ ಮುಂಬಡ್ತಿ ಪಡೆದು ತದನಂತರ ಪಿ.ಐ. ಹುದ್ದೆಗೆ ಮುಂಬಡ್ತಿ ಹೊಂದಿ 1994ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ಪಡೆಯುತ್ತಿದ್ದು, ದಿನಾಂಕ:1–1–1997ಕ್ಕೆ 1ನೇ ಸ್ಥಗಿತ ವೇತನ ಬಡ್ತಿ ದಿನಾಂಕ:1–1–1998ಕ್ಕೆ 2ನೇ ಸ್ಥಗಿತ ವೇತನ ಬಡ್ತಿ ಹಾಗೂ ದಿನಾಂಕ:1–1–99ಕ್ಕೆ 3ನೇ ಸ್ಥಗಿತ ವೇತನ ಬಡ್ತಿ ಪಡೆದು 1999ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ನಿಗಧಿಪಡಿಸಲಾಗಿದೆ. ಆದರೆ, ಕಿರಿಯ ಅಧಿಕಾರಿಯಾದ ಶ್ರೀ ಎಸ್.ಬಿ. ಪಾಟೀಲ್, ಡಿವೈ.ಎಸ್.ಪಿ. ರವರು ದಿನಾಂಕ:5–11–1977ಕ್ಕೆ ಪಿ.ಎಸ್.ಐ. ಹುದ್ದೆಗೆ ನೇರ ನೇಮಕ ಹೊಂದಿ ದಿನಾಂಕ:5–11–87ಕ್ಕೆ ಕಾಲಬದ್ಧ ವೇತನ ಬಡ್ತಿ ಪಡೆದು ತದನಂತರ ದಿನಾಂಕ:31–3–94 ರಂದು ಪಿ.ಐ. ಹುದ್ದೆಗೆ ಮುಂಬಡ್ತಿ ಪಡೆದು ವೇತನ ಶ್ರೇಣಿ 1900–3700ರಲ್ಲಿ ದಿನಾಂಕ:1–4–1998ಕ್ಕೆ ರೂ. 3600ರ ಸಂವಾದಿಯಾಗಿ ರೂ. 9840/– ಅನ್ನು 1999ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ವೇತನ ಪಡೆಯುತ್ತಿರುತ್ತಾರೆ. ಅಂದರೆ, ಸದರಿಯವರು 1999ರ ವೇತನ ಶ್ರೇಣಿಯಲ್ಲಿ ವೇತನ ನಿಗಧಿಗೊಳ್ಳುವ ಮೊದಲು ಯಾವುದೇ ಸ್ಥಗಿತ ವೇತನ ಬಡ್ತಿಗಳನ್ನು ಪಡೆದಿರುವುದಿಲ್ಲ. ತದನಂತರ ದಿನಾಂಕ:1–11–2001ಕ್ಕೆ 1ನೇ ಸ್ಥಗಿತ ವೇತನ ಬಡ್ತಿ, ದಿನಾಂಕ: 1–11–2002ಕ್ಕೆ 2ನೇ ಸ್ಥಗಿತ ವೇತನ ಬಡ್ತಿ ಹಾಗೂ ದಿನಾಂಕ:1–11–2003ಕ್ಕೆ 3ನೇ ಸ್ಥಗಿತ ವೇತನ ಬಡ್ತಿ ಮತ್ತು ದಿನಾಂಕ: 1–11–2004ಕ್ಕೆ 4ನೇ ಸ್ಥಗಿತ ವೇತನ ಬಡ್ತಿ ಪಡೆದು ಹಿರಿಯರಾದ ಶ್ರೀ ಬಿ.ಆರ್. ಚಂದ್ರಶೇಖರ್, ಡಿವೈ.ಎಸ್.ಪಿ. ರವರಿಗಿಂತ ಹೆಚ್ಚಿನ ವೇತನವನ್ನು ಪಡೆಯುತ್ತಿರುತ್ತಾರೆ. ಈ ರೀತಿಯಾಗಿ ಹಿರಿಯ ಮತ್ತು ಕಿರಿಯ ನೌಕರರುಗಳಲ್ಲಿ ವೇತನ ತಾರತಮ್ಯ ಉಂಟಾದಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಎಫ್.ಡಿ. 27 ಎಸ್.ಆರ್.ಪಿ. 05(2) ದಿನಾಂಕ:22–8–2005 ರಲ್ಲಿ ಸದರಿ ತಾರತಮ್ಯವನ್ನು ಸಮತೋಲನ ಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ ಈ ಪ್ರಕರಣದಲ್ಲಿ ಹಿರಿಯ ಮತ್ತು ಕಿರಿಯ ಅಧಿಕಾರಿಗಳ ವೇತನದಲ್ಲಾಗಿರುವ ವೇತನ ತಾರತಮ್ಯವನ್ನು ಸರಿಪಡಿಸುವಂತೆ ಕೋರಿ ಶ್ರೀ ಬಿ.ಆರ್. ಚಂದ್ರಶೇಖರ್, ಡಿವೈ.ಎಸ್.ಪಿ. ಮತ್ತು ಶ್ರೀ ಎಸ್.ಬಿ. ಪಾಟೀಲ್, ಡಿವೈ.ಎಸ್.ಪಿ ರವರ ವೇತನದ ವಿವರ ಮತ್ತು ಸೇವಾ ಪುಸ್ತಕಗಳನ್ನು ಲಗತ್ತಿಸಿ ಕಳುಹಿಸಿದ್ದಾರೆ.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 299 ಪೊಸಿಪ 2007 ಬೆಂಗಳೂರು, ದಿನಾಂಕ:21ನೇ ಏಪ್ರಿಲ್ 2008**

ಮೇಲಿನ ಪ್ರಸ್ತಾವನೆಯ ಹಿನ್ನಲೆಯಲ್ಲಿ ಶ್ರೀ ಬಿ.ಆರ್. ಚಂದ್ರಶೇಖರ್, ಡಿವೈ.ಎಸ್.ಪಿ. ರವರ ವೇತನವನ್ನು ಅವರಿಗಿಂತ ಕಿರಿಯ ಅಧಿಕಾರಿಯಾದ ಶ್ರೀ ಎಸ್.ಬಿ. ಪಾಟೀಲ್, ಡಿವೈ.ಎಸ್.ಪಿ ಇವರ ವೇತನದ ಸಮಕ್ಕೆ ದಿನಾಂಕ:1–11–2003 ರಿಂದ ರೂ. 10620+ 260+ 260+ 260 ಗಳಿಗೆ ಮತ್ತು ಪುನಃ ದಿನಾಂಕ:1–11–2004 ರಿಂದ ರೂ. 10620+ 260+ 260+260+260 ಗಳಿಗೆ ಎತ್ತರಿಸಿ ನಿಗಧಿಪಡಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 50 ವೆಚ್ಚ–6:2008 ದಿನಾಂಕ:29–3–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 693

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ತಿದ್ದುಪಡಿ**

**ಸಂಖ್ಯೆ: ಒಇ 188 ಪಿಪಿಇ 2008, ಬೆಂಗಳೂರು, ದಿನಾಂಕ:23ನೇ ಏಪ್ರಿಲ್ 2008**

ದಿನಾಂಕ: 27–3–2008ರ ಸರ್ಕಾರದ ಆದೇಶ ನಂ. ಒಇ 4 ಪಿಪಿಇ 2007ರ ವಿಷಯ ಭಾಗದ 1 ಮತ್ತು 2ನೇ ಸಾಲು ಹಾಗೂ ಆದೇಶ ಭಾಗದ 1 ಮತ್ತು 2ನೇ ಸಾಲಿನ " ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ವಿರಾಜಪೇಟೆ" ಎಂದು ನಮೂದಿಸಿರುವುದನ್ನು " ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಮೈಸೂರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ:27–3–2008ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 692

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ

ಮತ್ತು ಅಭಿಯೋಗಗಳು)

**ತಿದ್ದುಪಡಿ**

**ಸಂಖ್ಯೆ: ಒಇ 446 ಪಿಪಿಇ 2007, ಬೆಂಗಳೂರು, ದಿನಾಂಕ:23ನೇ ಏಪ್ರಿಲ್ 2008**

ಸಮಸಂಖ್ಯೆಯ ಆದೇಶ ದಿ:20.3.2008ರ ಪುಟ 2ರ ಕಂಡಿಕೆ 2ರಲ್ಲಿನ 4ನೇ ಸಾಲಿನಲ್ಲಿ "ರೂ. 1000/–ಗಳ ಅಕ್ರಮ ಸಂಭಾವನೆ" ಎಂಬುದರ ಬದಲಾಗಿ "ರೂ. 2000/–ಗಳ ಅಕ್ರಮ ಸಂಭಾವನೆ" ಎಂದೂ ಹಾಗೆಯೇ ಆದೇಶ ಭಾಗದ ಮೊದಲನೇ ಕಂಡಿಕೆಯ ಮೊದಲನೇ ಸಾಲಿನಲ್ಲಿ "ಕಲಂ 19(ಸಿ)" ಎಂಬುದರ ಬದಲಾಗಿ "ಕಲಂ 19(1)(ಬಿ)" ಎಂದೂ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಇದರ ಹೊರತಾಗಿ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 691

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ

ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ:** ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**

1 ಸಿ.ಆ.ಸು ಇಲಾಖೆಯ ಅಧಿಸೂಚನೆ ಸಂಖ್ಯೆ:ಸಿಆಸುಇ 443 ಎಸ್‌ಎಎಸ್ 2005 ದಿನಾಂಕ: 25–12–2005 ಮತ್ತು ತಿದ್ದುಪಡಿ ದಿ:4–1–2006.

2. ಸಿ.ಆ.ಸು. ಇಲಾಖೆಯ ಅಧಿಸೂಚನೆ ಸಂಖ್ಯೆ:ಸಿಆಸುಇ 128 ಎಸ್ ಎಎಸ್ 2008 ದಿನಾಂಕ: 16–4–2008

3 ಸಿ.ಆ.ಸು ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 128 ಎಸ್‌ಎಎಸ್ 2008 ದಿನಾಂಕ:23.4.2008.

**ಪ್ರಸ್ತಾವನೆ:**

ಸಿ.ಆ.ಸು.ಇಲಾಖೆಯು ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಅಧಿಸೂಚನೆ ಮತ್ತು ತಿದ್ದುಪಡಿಯಲ್ಲಿ ಶ್ರೀ ಟಿ ಶ್ಯಾಂಭಟ್ ಭಾ.ಆ.ಸೇ (ಕೆಎನ್–92) ಇವರನ್ನು ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಗೆ ನೇಮಿಸಲಾಗಿತ್ತು.

ಪ್ರಸ್ತುತ ಸಿ.ಆ.ಸು. ಇಲಾಖೆಯು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಟಿ. ಶ್ಯಾಂಭಟ್ ಭಾ.ಆ.ಸೇ., (ಕೆ–ಎನ್–92) ಇವರಿಗೆ ಐ.ಎ.ಎಸ್ ಸೂಪರ್ ಟೈಂ ಸ್ಕೇಲ್ ವೃಂದಕ್ಕೆ ಬಡ್ತಿ ನೀಡಿ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಎಂದು ಉನ್ನತೀಕರಿಸಿದ ಹುದ್ದೆಯಲ್ಲಿ ನೇಮಕ ಮಾಡಿದೆ.

ಜೊತೆಗೆ ಸಿ.ಆ.ಸು. ಇಲಾಖೆಯು ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಟಿ. ಶ್ಯಾಂಭಟ್ ರವರಿಗೆ ಆಯುಕ್ತರು ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ ಎಂದು ಉನ್ನತೀಕರಿಸಿದ ಹುದ್ದೆಗೆ ಬಡ್ತಿ ನೀಡಿ ನೇಮಿಸಿರುವ ಕಾರಣ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ, ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಎಂದು ಎಕ್ಸ್–ಕ್ರೇಡರ್ ಹುದ್ದೆಯನ್ನು ಸೃಜಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸಿ.ಆ.ಸು. ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈಗಾಗಲೇ ಶ್ರೀ ಟಿ. ಶ್ಯಾಂಭಟ್ ಭಾ.ಆ.ಸೇ. ಇವರು ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆಯಲ್ಲಿ ಕ್ರಮ ಸಂಖ್ಯೆ (2)ರ ದಿನಾಂಕ:16–4–2008ರ ಅಧಿಸೂಚನೆ ಮೇರೆಗೆ ದಿ:16–4–2008 ರಂದು ಕಾರ್ಯ ವರದಿ ಮಾಡಿಕೊಂಡಿರುವ ಹಿನ್ನಲೆಯಲ್ಲಿ ಸದರಿ ದಿನಾಂಕದಿಂದಲೇ ಜಾರಿಗೆ ಬರುವಂತೆ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಹುದ್ದೆಯನ್ನು ಸೃಜಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 42 ಮುಸೇವಿ 2008, ಬೆಂಗಳೂರು, ದಿನಾಂಕ:25ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಐ.ಎ.ಎಸ್ ಸೂಪರ್‌ಟೈಂ ಸ್ಕೇಲ್ ವೃಂದದ ರೂ. 18400–500–22,400 ವೇತನ ಶ್ರೇಣಿಯಲ್ಲಿ ದಿನಾಂಕ:16.4.2008ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆ ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಈ ಹುದ್ದೆಯನ್ನು ಸೃಜಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 690

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪವಿಭಾಗ, ಬೈಲಹೊಂಗಲ ಇವರ ವಿರುದ್ಧ ಟ್ರ್ಯಾಪ್ ಪ್ರಕರಣ–ವಿಚಾರಣೆ ಬಾಕಿ ಇಟ್ಟು ಅಮಾನತ್ತುಗೊಳಿಸುವ ಬಗ್ಗೆ–ಆದೇಶ.

**ಓದಲಾಗಿದೆ:** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಲ್–28/ಸಿಆರ್–13/2008/ಬಿಜಿಎಂ, ದಿನಾಂಕ:5–4–2008.

**ಪ್ರಸ್ತಾವನೆ:**

ಶ್ರೀ ರಾಮಪ್ಪ ಕಲ್ಲಪ್ಪ, ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ನೀರು ಸರಬರಾಜು ಯೋಜನೆಯಲ್ಲಿ ಗುರ್ಜರ ಗ್ರಾಮದಿಂದ ಗುಡ್ಡದೂರು ಗ್ರಾಮದವರೆಗೆ ಹಾಕಲಾದ ಪೈಪ್‌ಲೈನ್ ಕಾಮಗಾರಿ ಸಂಬಂಧ ರೂ. 4,25,936/–ಗಳ ಚೆಕ್‌ನ್ನು ಫಿರ್ಯಾದುದಾರರಾದ ಶ್ರೀ ಅಬ್ಬಾಸ್ ಅಕ್ಬರ್ ಸಾಬ್ ಮಿರ್ಜಣ್ಣವರ್, ಕೆ.ಆರ್.ಸಿ. ನಗರ ಇವರಿಗೆ ಬಿಡುಗಡೆ ಮಾಡಲು ರೂ. 38,000/– ಗಳ ಲಂಚದ ಹಣಕ್ಕಾಗಿ ಒತ್ತಾಯಿಸಿ, ಅದನ್ನು ದಿನಾಂಕ:4–4–2008 ರಂದು ಪಡೆಯುತ್ತಿದ್ದ ಸಮಯದಲ್ಲಿ ಲೋಕಾಯುಕ್ತದ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ಆರೋಪಿತರ ಕಛೇರಿಯಲ್ಲಿ ಬೀಸಿದ (ಟ್ರ್ಯಾಪ್) ಬಲೆಯಲ್ಲಿ ಆರೋಪಿತರಾದ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ಸಿಕ್ಕಿಹಾಕಿಕೊಂಡಿರುತ್ತಾರೆಂದು, ಸದರಿ ಅಧಿಕಾರಿಯನ್ನು

ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಲಾಗಿದೆ ಹಾಗೂ ಪ್ರಕರಣದ ತನಿಖೆ ಮುಂದುವರಿದಿದೆ ಎಂದು ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಉಲ್ಲೇಖದ ಪತ್ರದಲ್ಲಿ ವರದಿ ಮಾಡಿರುತ್ತಾರೆ ಮತ್ತು ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನ)ವನ್ನು ಬೇರೆ ಕಡೆಗೆ ವರ್ಗಾಯಿಸಲು ಕೋರಿರುತ್ತಾರೆ.

ಅಲ್ಲದೆ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ ಇವರ ವಿರುದ್ಧ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಮೊಕದ್ದಮೆ ಸಂಖ್ಯೆ:13/2008ನ್ನು ದಾಖಲಿಸಲಾಗಿದೆ ಎಂದು ವರದಿ ಮಾಡಿರುತ್ತಾರೆ.

ಲೋಕಾಯುಕ್ತದ ಅಪರ ಪೊಲೀಸ್ ಮಹಾ ನಿರ್ದೇಶಕರು ಮೇಲೆ ಹೇಳಿರುವ ತಮ್ಮ ಪತ್ರದಲ್ಲಿ ಮಾಡಿರುವ ವರದಿಯನ್ನು ಪರಿಶೀಲಿಸಲಾಗಿ, ಶ್ರೀ ರಾಮಪ್ಪ ಕಲ್ಲಪ್ಪ, ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್‌ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ಮೇಲೆ ಹೇಳಿದಂತೆ ಲಂಚವನ್ನು ಸ್ವೀಕರಿಸುವ ಕ್ರಿಮಿನಲ್ ಅಪರಾಧವನ್ನು ಎಸಗಿದ್ದಾರೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸದರಿ ಕ್ರಿಮಿನಲ್ ಆರೋಪಗಳು ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರು ಇರುವ ಹುದ್ದೆಯಲ್ಲಿನ ಕರ್ತವ್ಯ ನಿರ್ವಹಣೆಗೆ ಸಂಬಂಧಿಸಿರುವುದರಿಂದಲೂ ಮತ್ತು ಅವು ಅವರ ಕರ್ತವ್ಯ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸಿರುವಂತವುಗಳಾಗಿರುವುದರಿಂದಲು, ಮತ್ತು ಸದರಿ ಕ್ರಿಮಿನಲ್ ಆರೋಪವು ನೈತಿಕ ದುರಾಚಾರವನ್ನು ಒಳಗೊಂಡಿರುವುದರಿಂದ ವಿಷಯ, ಸಂದರ್ಭ ಸನ್ನಿವೇಶಗಳನ್ನು ಮತ್ತು ಒದಗಿಬಂದ ದಾಖಲೆಗಳನ್ನು ಪರಿಗಣಿಸಲಾಗಿ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ ಇವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಸರ್ಕಾರವು ಅಭಿಪ್ರಾಯ ಪಟ್ಟಿರುತ್ತದೆ.

**ಆದೇಶ ಸಂಖ್ಯೆ ಗ್ರಾಅಪ 18 ಇಎನ್‌ಕ್ಯೂ 08, ಬೆಂಗಳೂರು, ದಿನಾಂಕ:22ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳನುಸಾರ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ 1 (ಎ) ಉಪ–ನಿಯಮದಡಿ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರವು ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೈಲಹೊಂಗಲ ಇವರ ಮೇಲಿನ ಇಲಾಖಾ ವಿಚಾರಣೆ/ ಕ್ರಿಮಿನಲ್ ಮೊಕದ್ದಮೆಯನ್ನು ಬಾಕಿ ಇಟ್ಟು, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ರಾಮಪ್ಪ ಕಲ್ಲಪ್ಪ ನಿಂಗನೂರೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಲೀನ್‌ನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು ಇಲ್ಲಿಗೆ ವರ್ಗಾಯಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 689

**ಎಸ್.ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಬಿ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ –ಕರ್ನಾಟಕ ಇದನ್ನು 2008–09ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಪ್ರಸ್ತಾವನೆ:**

2005–06ನೇ ಸಾಲಿನ 1–2–2006ರ ತನಕ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯ ಅನುಷ್ಠಾನದ ಕಾರ್ಯಚರಣೆಯ ರಾಜ್ಯದ ಎಲ್ಲಾ 27 ಜಿಲ್ಲೆಗಳಲ್ಲಿ ಚಾಲ್ತಿಯಲ್ಲಿದ್ದು, ದಿನಾಂಕ:2–2–2006 ರಿಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದನ್ನು ಮೊದಲನೇ ಹಂತದ ಐದು ಜಿಲ್ಲೆಗಳಾದ ಬೀದರ್, ಗುಲ್ಬರ್ಗ,

ರಾಯಚೂರು, ದಾವಣಗೆರೆ ಮತ್ತು ಚಿತ್ರದುರ್ಗ ಇವುಗಳಲ್ಲಿ ಅನುಷ್ಠಾನಗೊಳಿಸಿದ್ದು, ಉಳಿದ 22 ಜಿಲ್ಲೆಗಳಲ್ಲಿ ಮಾತ್ರ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯನ್ನು ಸೀಮಿತಗೊಳಿಸಲಾಗಿರುತ್ತದೆ. ಹಾಗೆಯೇ, 2007–08ನೇ ಸಾಲಿನಲ್ಲಿ ದಿನಾಂಕ:1–4–2007 ರಿಂದ ಅನ್ವಯವಾಗುವಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದನ್ನು ಎರಡನೇ ಹಂತದಲ್ಲಿ ಇನ್ನು ಆರು ಜಿಲ್ಲೆಗಳಾದ, ಬೆಳಗಾಂ, ಬಳ್ಳಾರಿ, ಚಿಕ್ಕಮಗಳೂರು, ಹಾಸನ ಕೊಡಗು ಮತ್ತು ಶಿವಮೊಗ್ಗ ಇವುಗಳಿಗೆ ವಿಸ್ತರಿಸಿ, ಅನುಷ್ಠಾನವನ್ನು ಜಾರಿಗೊಳಿಸಲಾಗಿರುತ್ತದೆ ಮತ್ತು ಸದರಿ ಸಾಲಿನಲ್ಲಿ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯನ್ನು 16 ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಲಾಗಿರುತ್ತದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನವು ಇರುವ ಜಿಲ್ಲೆಗಳಲ್ಲಿ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯು, ವಿಲೀನಗೊಂಡು ಸ್ಥಗಿತಗೊಳಿಸಲಾಗಿರುತ್ತದೆ.

ಮುಂದುವರೆದು, ಕೇಂದ್ರ ಸರ್ಕಾರದ ಜಂಟಿ ಕಾರ್ಯದರ್ಶಿ ಗ್ರಾಮೀಣಾಭಿವೃದ್ಧಿ, ಮಂತ್ರಾಲಯದವರು ತನ್ನ ಅರೆ ಸರ್ಕಾರಿ ಪತ್ರದ ದಿನಾಂಕ:8–10–2007ರಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ದಿನಾಂಕ:1–4–2008ರಿಂದ ಅನ್ವಯವಾಗುವಂತೆ ಜಾರಿಗೆ ಬರಲು ರಾಜ್ಯದ ಉಳಿದ ಎಲ್ಲಾ 18 ಜಿಲ್ಲೆಗಳಿಗೆ ವಿಸ್ತರಿಸಿರುತ್ತದೆ ಮತ್ತು ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅಸ್ತಿತ್ವದಿಂದ, ಸದರಿ ಯೋಜನೆಯಲ್ಲಿ ವಿಲೀನಗೊಂಡು, ಸಂಪೂರ್ಣವಾಗಿ ನಿಲ್ಲಿಸಲಾಗಿದೆ. 2008–09ನೇ ಸಾಲಿನಲ್ಲಿ ಯೋಜನೆಯನ್ನು ವಿಸ್ತರಿಸಲಾದ ಜಿಲ್ಲೆಗಳು, ಬಾಗಲಕೋಟೆ, ಬೆಂಗಳೂರು (ನಗರ), ಬೆಂಗಳೂರು (ಗ್ರಾಮಾಂತರ), ಬಿಜಾಪುರ, ಚಾಮರಾಜನಗರ, ದಕ್ಷಿಣಕನ್ನಡ, ಧಾರವಾಡ, ಹಾವೇರಿ, ಗದಗ ಕೊಪ್ಪಳ, ಕೋಲಾರ, ಮಂಡ್ಯ, ಮೈಸೂರು, ತುಮಕೂರು, ಉತ್ತರಕನ್ನಡ, ಉಡುಪಿ, ಚಿಕ್ಕಬಳ್ಳಾಪುರ, ರಾಮನಗರ ಹೀಗಾಗಿ 2008–09ನೇ ಸಾಲಿನಲ್ಲಿ ರಾಜ್ಯದ ಎಲ್ಲಾ 29 ಜಿಲ್ಲೆಗಳು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕೆ ಒಳಪಟ್ಟಿದ್ದು, ಸದರಿ ಯೋಜನೆಯನ್ನು ಬೇಡಿಕೆ ಆಧಾರದ ಮೇಲೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಒದಗಿಸಿರುವ ಅನುದಾನ ಮತ್ತು ನಿಬಂಧನೆಗಳಿಗೆ ಒಳಪಟ್ಟು ಮುಂದುವರೆಸಿಕೊಂಡು ಹೋಗುವ ಅವಶ್ಯಕತೆ ಇರುತ್ತದೆ. ಸದರಿ ಯೋಜನೆಯ ಅನುದಾನವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು 90:10 ರ ಅನುಪಾತದಲ್ಲಿ ಹಂಚಿಕೊಂಡು ವೆಚ್ಚ ಮಾಡುತ್ತದೆ. ಸದರಿ ಯೋಜನೆಗೆ ಬಿಡುಗಡೆ ಮಾಡುವ ರಾಜ್ಯದ ಪಾಲಿನ ಅನುದಾನವನ್ನು 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ NREGA ಯೋಜನೆಯ ಲೆಕ್ಕಶೀರ್ಷಿಕೆಯಲ್ಲಿ ಭರಿಸಬಹುದಾಗಿರುತ್ತದೆ. ಸದರಿ ಯೋಜನೆಯನ್ನು 2008–09ನೇ ಸಾಲಿನಲ್ಲಿ ಮುಂದುವರೆಸಿಕೊಂಡು ಹೋಗುವ ಅವಶ್ಯಕತೆ ಇರುವುದರಿಂದ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 35 ಉಖಾಯೋ 08, ಬೆಂಗಳೂರು, ದಿನಾಂಕ:17ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ–ಕರ್ನಾಟಕ ಇದನ್ನು ರಾಜ್ಯದ ಎಲ್ಲಾ 29 ಜಿಲ್ಲೆಗಳಲ್ಲಿ 2008–09ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬೇಡಿಕೆ ಆಧಾರದ ಮೇಲೆ ಬಿಡುಗಡೆ ಮಾಡುವ ಅನುದಾನ ಮತ್ತು ನಿಬಂಧನೆಗಳಿಗೆ ಮತ್ತು ರಾಜ್ಯದ ಪಾಲನ್ನು 2008–09ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದ NREGA ಯೋಜನೆಯ ಲೆಕ್ಕಶೀರ್ಷಿಕೆಯಲ್ಲಿ ಒದಗಿಸಲಾದ ಅನುದಾನದಿಂದ ಭರಿಸುವ ನಿಬಂಧನೆಗಳಿಗೆ ಒಳಪಟ್ಟು ಮುಂದುವರೆಯುವುದಕ್ಕೆ ಸರ್ಕಾರವು ಅನುಮೋದನೆ ನೀಡಿದೆ. ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 181 ಪಿಬಿಎಸ್ 2008 ದಿನಾಂಕ:17–4–2008ರಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 688

**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ, ಹಾಗೂ
ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಪಿ.ಜಿ. ವಾಂಡಕರ, ಡಿಎಸ್‌ಪಿ (ಹಾಲಿ ಅಮಾನತ್ತು) ಮತ್ತು ಶ್ರೀ ಎಸ್.ಆರ್. ಪಾಟೀಲ್, ಪಿಐ ಹಾಲಿ ರೋಣ ವೃತ್ತ ಗದಗ ಜಿಲ್ಲೆ ರವರುಗಳ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:** 1 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ರವರ ಕಛೇರಿಯ ಪತ್ರ ಸಂಖ್ಯೆ:ಸಿಬಿ(5)53/2007–08 ದಿನಾಂಕ:6–3–2008.

2 ಸರ್ಕಾರದ ಆದೇಶ ಸಂಖ್ಯೆ:ಒಇ 83 ಪೊಸಿಪ 2008 ದಿನಾಂಕ:5–4–2008

**ಪ್ರಸ್ತಾವನೆ:**

ಶ್ರೀ ಪಿ.ಜಿ ವಾಂಡಕರ, ಹಾಲಿ ಡಿಎಸ್‌ಪಿ, ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಬೆಳಗಾವಿ ಮತ್ತು ಶ್ರೀ ಎಸ್.ಹೆಚ್. ಗಂಗೀರೆಡ್ಡಿ, ಡಿಎಸ್‌ಪಿ, ಖಡೇಬಜಾರ್ ಉಪವಿಭಾಗ, ಬೆಳಗಾವಿ ರವರುಗಳು (1) ಶ್ರೀ ಮಾರುತಿ ರಾಮು ಧಾಮಣೇಕರ ಸಾ ಸರೋಳಿ, (ಖಾನಾಪುರ ಪೊಲೀಸ್ ಠಾಣೆ ಅಪರಾಧ ಸಂ 217/07) ಚಂದಗಡ ತಾಲ್ಲೂಕು, ಕೊಲ್ಲಾಪುರ ಜಿಲ್ಲೆ, (2) ಶ್ರೀ ಗಜಾನನ ಬಾಪು ನಾವಗೇಕರ, (ಬೆಳಗಾವಿ ಗ್ರಾಮೀಣ ಪೊಲೀಸ್ ಠಾಣೆ ಗುನ್ನಾ ಸಂ. 146/07). ಸಾ ತಿಲಕವಾಡಿ, ಚಾಗುಲೇವಾಡಿ, ಬೆಳಗಾವಿ ಮತ್ತು (3) ಶ್ರೀಮತಿ ರಜಿಯಾ ಇಲಾಯಿ ಬಢೇಬಾಯಿ (ಎಪಿಎಂಸಿ ಯಾರ್ಡ್ ಪೊಲೀಸ್ ಠಾಣೆ ಗುನ್ನಾ ಸಂ. 104/07) ಇವರುಗಳು ಕಾಣೆಯಾಗಿದ್ದರ ಬಗ್ಗೆ ಕ್ರಮವಾಗಿ ಪಿರ್ಯಾದುದಾರರಾದ ಶ್ರೀ ರಾಮು ಸಂತು ಧಾಮಣೇಕರ, ಸಾ ಸರೋಳಿ, ಚಂದಗಡ ತಾಲ್ಲೂಕು, ಕೊಲ್ಲಾಪುರ ಜಿಲ್ಲೆ ಶ್ರೀ ಬಾಪು ಮಹಾದೇವ ನಾವಗೇಕರ, ಸಾ. ತಿಲಕವಾಡಿ ಚೌಗುಲೇವಾಡಿ ಮತ್ತು ಶ್ರೀ ರಮೀಜ್ ಬಢೇಬಾಯಿ ರವರುಗಳು ಶ್ರೀ ಪ್ರವೀಣ್ ಶಿಂತ್ರೆ ಹಾಗೂ ಆತನ ಅನುಚರರ ವಿರುದ್ಧ ದಿ:3–2–07 4/3/06 ಗಳಂದು ದೂರು ನೀಡಲು ಬಂದಾಗ, ದೂರನ್ನು ಸ್ವೀಕರಿಸಿ ದಾಖಲು ಮಾಡಿಕೊಳ್ಳದೆ ಇರುವುದು ಹಾಗೂ ಮೇಲಾಧಿಕಾರಿಗಳು ದೂರು ದಾಖಲಿಸುವಂತೆ ಆದೇಶ ನೀಡಿದ್ದಾಗ್ಯೂ ಸಹ, ದೂರನ್ನು ದಾಖಲು ಮಾಡಿಕೊಳ್ಳದೆ ಇರುವ ಮೂಲಕ ಕರ್ತವ್ಯದಲ್ಲಿ ಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಶ್ರೀ ಪಿ.ಜಿ. ವಾಂಡಕರ, ಹಾಲಿ ಡಿಎಸ್‌ಪಿ, ಮತ್ತು ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಬೆಳಗಾವಿ ಮತ್ತು ಶ್ರೀ ಎಸ್.ಆರ್. ಪಾಟೀಲ್, ಪಿ.ಐ. ಹಾಲಿ ರೋಣ ವೃತ್ತ ಗದಗ ಜಿಲ್ಲೆ ರವರುಗಳು ಗಂಭೀರ ಸ್ವರೂಪದ ಕರ್ತವ್ಯ ಲೋಪ ಎಸಗಿರುವುದರಿಂದ ಶ್ರೀ ಪಿ.ಜಿ. ವಾಂಡಕರ, ಹಾಲಿ ಡಿಎಸ್‌ಪಿ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಿ, ಇವರು ಮತ್ತು ಶ್ರೀ ಎಸ್.ಆರ್. ಪಾಟೀಲ್ ಪಿ.ಐ. ರವರ ವಿರುದ್ಧ ಕೆಎಸ್‌ಪಿ (ಡಿಪಿ) ನಿಯಮ 1965/89ರ ನಿಯಮ 6 ಉಪನಿಯಮ 2 & 8 ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಸದರಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಪೊಲೀಸ್ ಅಧೀಕ್ಷಕರು, ಬಿಜಾಪುರ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶ ಸಂಖ್ಯೆ:ಒಇ 83 ಪೊಸಿಪ 2008 ದಿನಾಂಕ:5–4–2008ರಲ್ಲಿ ಶ್ರೀ ವಾಂಡಕರ, ಡಿವೈ.ಎಸ್.ಪಿ ರವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಒಇ 83 ಪೊಸಿಪ 2008 ಬೆಂಗಳೂರು, ದಿನಾಂಕ:11ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಪಿ.ಜಿ ವಾಂಡಕರ ಡಿವೈ.ಎಸ್.ಪಿ (ಹಾಲಿ ಅಮಾನತ್ತು) ಶ್ರೀ ಎಸ್.ಆರ್. ಪಾಟೀಲ್, ಪಿ.ಐ. ಹಾಲಿ ರೋಣ ವೃತ್ತ ಗದಗ ಜಿಲ್ಲೆ ರವರುಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 1965/89ರ ನಿಯಮ 6ರ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಸಲು ಪೊಲೀಸ್ ಅಧೀಕ್ಷಕರು, ಬಿಜಾಪುರ ಜಿಲ್ಲೆ ರವರನ್ನು ವಿಶೇಷ ಅಧಿಕಾರ ಹೊಂದಿದ ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ನಡೆಸಿ 4 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಸೂಚಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 687

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ENERGY SECRETARIAT**

**ADDENDUM**

**No. EN 117 NCE 2008, Bangalore, Date:26th April 2008**

In Government Order of even number dated:28-3-2008, the following sentence should be added and read after the schedule "For the ehancement capacity of 55.00 MW P.P.A. may be entered into with

any of the ESCOM's only, if they are in a position to buy this power otherwise the company can sell to any party under open access after paying the charges prescribed by KERC".

By Order and in the name of the President of India,

**SURESH. B. KRISHNAPPANAVAR**

P.R. 682

Under Secretary to Government

Energy Department

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಪಸಂಮೀ 111 ಪಸಸೇ 2008, ಬೆಂಗಳೂರು, ದಿನಾಂಕ:19ನೇ ಏಪ್ರಿಲ್ 2008**

ಸರ್ಕಾರದ ಆದೇಶ ಸಂಖ್ಯೆ:ಪಸಂಮಿ 250 ಪಸಸೇ 2005, ದಿನಾಂಕ:27–3–2007ರಲ್ಲಿ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಹಾಗೂ ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಅವಶ್ಯ ಸಿಬ್ಬಂದಿಯೊಂದಿಗೆ ಮೇಲ್ದರ್ಜೆಗೇರಿಸಲು ಸರ್ಕಾರ ಅನುಮತಿ ನೀಡಿದ್ದು, ಸದರಿ ಆದೇಶದ ಅನುಬಂಧ–1ರಲ್ಲಿನ ಕ್ರಮಸಂಖ್ಯೆ:17ರ ಧಾರವಾಡ ಜಿಲ್ಲೆಗೆ ಸಂಬಂಧಿಸಿದ ಪಶುವೈದ್ಯಕೀಯ ಸಂಸ್ಥೆಗಳನ್ನು ಈ ಕೆಳಗೆ ತಿದ್ದುಪಡಿ ಮಾಡಿರುವಂತೆ ಓದಿಕೊಳ್ಳತಕ್ಕದ್ದು.

| ಕ್ರ. ಸಂ | ಸರ್ಕಾರಿ ಆದೇಶದ ಕ್ರಮಸಂಖ್ಯೆ | ತಾಲ್ಲೂಕಿನ ಹೆಸರು | ಸರ್ಕಾರದ ಆದೇಶ ಸಂಖ್ಯೆ:ಪಸಂಮೀ 250 ಪಸಸೇ 2005, ದಿನಾಂಕ:27–3–2007 ರಲ್ಲಿರುವಂತೆ ಸಂಸ್ಥೆ ಹೆಸರು ಹಾಗೂ ಕೇಂದ್ರದ ಕ್ರಮಸಂಖ್ಯೆ | ತಿದ್ದುಪಡಿ ಮಾಡಿರುವುದು |
|---|---|---|---|---|
| 1 | 17 | ಧಾರವಾಡ | 90) ಮಂಗಳ ಘಾಟ್ಟಿ (ಪ್ರಾಥಮಿಕ ಪಶುಚಿಕಿತ್ಸಾಲಯ) | ಮಂಗಳಗಟ್ಟಿ ಪಶುಚಿಕಿತ್ಸಾಲಯ |
| | | ಕಲಘಟಗಿ | 91) ಗುಳಗಿಹುಲಿಕೊಪ್ಪ (ಕೃತಕ ಗರ್ಭಧಾರಣಾ ಕೇಂದ್ರ) 92) ಹಿರೇಹೊನ್ನಹಳ್ಳಿ (ಕೃತಕ ಗರ್ಭಧಾರಣಾ ಕೇಂದ್ರ) | ಗಳಗಿಹುಲಕೊಪ್ಪ ಪಶುಚಿಕಿತ್ಸಾಲಯ ಹಿರೇಹೊನ್ನಳ್ಳಿ ಪಶುಚಿಕಿತ್ಸಾಲಯ |
| | | ಕುಂದಗೋಳ | 93) ಬರದ್ವಾಡ (ಕೃತಕ ಗರ್ಭಧಾರಣಾ ಕೇಂದ್ರ) | ಭರದ್ವಾಡ ಪಶುಚಿಕಿತ್ಸಾಲಯ |

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 679

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ಸುತ್ತೋಲೆ ಸಂಖ್ಯೆ:ಕೃತೋಇ 4 ಕೃತೋಪ 2008, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2008**

**ವಿಷಯ:** ಕೃಷಿ ಮತ್ತು ತೋಟಗಾರಿಕಾ ಇಲಾಖೆಗೆ ಸಂಬಂಧಿಸಿದ ಪತ್ರ ಇತ್ಯಾದಿಗಳನ್ನು ವಿಶಿಷ್ಟ ಪಿನ್ ಕೋಡ್ 560 248 ಬಳಸಿ ಕಳುಹಿಸುವ ಬಗ್ಗೆ.

ಭಾರತೀಯ ಅಂಚೆ ಇಲಾಖೆಯವರು ಕೃಷಿ ಮತ್ತು ತೋಟಗಾರಿಕಾ ಇಲಾಖೆಗೆ ಪ್ರತ್ಯೇಕ ವಿಶಿಷ್ಟ ಪಿನ್ ಕೋಡ್ 560 248 ನ್ನು ಶೀಘ್ರ, ಸುವ್ಯವಸ್ಥಿತ ಹಾಗೂ ಸುಗಮ ಅಂಚೆ ಸೇವೆಯ ಸಲುವಾಗಿ ಹಂಚಿಕೆ ಮಾಡಿರುತ್ತಾರೆ ಹಾಗೂ ಅದನ್ನು ಬಳಸಲು ವ್ಯಾಪಕ ಪ್ರಚಾರ ನೀಡುವಂತೆ ವಿನಂತಿಸಿರುತ್ತಾರೆ.

ಆದುದರಿಂದ ಇನ್ನು ಮುಂದೆ ಕೃಷಿ ಮತ್ತು ತೋಟಗಾರಿಕಾ ಸಚಿವಾಲಯಕ್ಕೆ ಕಳುಹಿಸಿಕೊಡುವ ಎಲ್ಲಾ ಟಪಾಲು ಲಕೋಟೆ ಇತ್ಯಾದಿಗಳಲ್ಲಿ ಬೆಂಗಳೂರು–560 001ರ ಬದಲು ಬೆಂಗಳೂರು–560 248 ಎಂಬುದಾಗಿ ನಮೂದಿಸಿ ಸಹಕರಿಸುವಂತೆ ಸೂಚಿಸಲಾಗಿದೆ.

**ಜಿ.ಕೆ. ಗುರಾಣಿ**

ಪಿ.ಆರ್. 684

ಸರ್ಕಾರದ ಅಧೀನ ಕಾರ್ಯದರ್ಶಿ

ಕೃಷಿ ಮತ್ತು ತೋಟಗಾರಿಕೆ ಇಲಾಖೆ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಗ್ರಾಮ ಸ್ವರಾಜ್ ಯೋಜನೆಯಡಿ 2007–08ನೇ ಸಾಲಿಗೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಗ್ರಾಮ ಪಂಚಾಯತಿಗಳಿಗೆ ಮೊದಲನೇ ಕಂತಿನ ಮುಕ್ತ ಅನುದಾನ (ಬ್ಲಾಕ್ ಅನುದಾನ) ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕೂಡ್ಲಿಗಿ ತಾಲ್ಲೂಕು ಪಂಚಾಯಿತಿ ಕಾರ್ಯ ನಿರ್ವಾಹಕ ಅಧಿಕಾರಿಗಳ ಪತ್ರ ಸಂಖ್ಯೆ: ತಾಪಂಕೂ/ಯೋಫ/ಗ್ರಾಸ್ವ/ಹ/ಬಪ್ರ/20/2007–08/510 ದಿನಾಂಕ:20–2–2008

**ಪ್ರಸ್ತಾವನೆ:**

ವಿಶ್ವ ಬ್ಯಾಂಕ್ ನೆರವಿನ ಗ್ರಾಮ, ಸ್ವರಾಜ್–ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಡಿ ಗ್ರಾಮ ಪಂಚಾಯಿತಿಗಳಿಗೆ ಅವು ತಯಾರಿಸಿದ ಯೋಜನಾ ಅಭಿವೃದ್ಧಿ ವರದಿ 2006–12 ರ ಆಧಾರದ ಮೇಲೆ ಐದು ವರ್ಷದ ಅವಧಿಗೆ ಅನುದಾನವನ್ನು ಕಾರ್ಯಾಚರಣೆ ಕೈಪಿಡಿಯ ಮಾರ್ಗಸೂಚಿಗಳನ್ವಯ ಮುಕ್ತ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ. ಈಗಾಗಲೇ ಮಾರ್ಗಸೂಚಿಗಳನ್ವಯ 2006–07ನೇ ಸಾಲಿಗೆ ಅನುದಾನವನ್ನು ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗಿದೆ. ವಿಶ್ವಬ್ಯಾಂಕಿನ 2ನೇ ನಿಯೋಗವು ಒಪ್ಪಿದಂತೆ 2007–08ನೇ ಸಾಲಿನ ಅನುದಾನವನ್ನು ಶೇ. 50 ರಷ್ಟು ಅನುದಾನವನ್ನು 2006–07ನೇ ಸಾಲಿಗೆ ಬಿಡುಗಡೆ ಮಾಡಲಾದ ಅನುದಾನದಲ್ಲಿ ಶೇ 70 ರಷ್ಟು ಹಣಬಳಕೆ ಮಾಡಿದ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗುವುದು. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ 1 ಗ್ರಾಮಪಂಚಾಯಿತಿಗಳ 2006–07ನೇ ಸಾಲಿನ ಹಣ ಬಳಕೆ ಪ್ರಮಾಣ ಪತ್ರಗಳನ್ನು ಕಾರ್ಯನಿರ್ವಾಹಕ ಅಧಿಕಾರಿಗಳು ಸಂಡೂರು ಇವರು ಮೇಲೆ ಓದಲಾದ ಪತ್ರದ ಮೂಲಕ ಕಳುಹಿಸಿದ್ದಾರೆ. ಅವುಗಳಲ್ಲಿ 1 ಗ್ರಾಮ ಪಂಚಾಯಿತಿಗಳು ಶೇ 70ಕ್ಕೂ ಹೆಚ್ಚು ಅನುದಾನವನ್ನು ಬಳಕೆ ಮಾಡಿವೆ. ಸದರಿ ಗ್ರಾಮ ಪಂಚಾಯಿತಿಗಳಿಗೆ 2007–08ನೇ ಸಾಲಿನ ಮೊದಲನೇ ಕಂತಿನ ಮುಕ್ತ ಅನುದಾನವನ್ನು ಬಿಡುಗಡೆ ಮಾಡಬಹುದಾಗಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 167 ಗ್ರಾಸ್ವಯೋ 2007, ಬೆಂಗಳೂರು, ದಿನಾಂಕ:3ನೇ ಮಾರ್ಚ್ 2008**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ 1 ಗ್ರಾಮ ಪಂಚಾಯಿತಿಗಳಿಗೆ ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ತಿಳಿಸಿರುವಂತೆ ಒಟ್ಟು ರೂ. 4.26 ಲಕ್ಷಗಳನ್ನು (ರೂಪಾಯಿ ನಾಲ್ಕು ಲಕ್ಷದ ಇಪ್ಪತ್ತಾರು ಸಾವಿರ ಮಾತ್ರ) ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ. ಸದರಿ ಹಣವನ್ನು ಲೆಕ್ಕಶೀರ್ಷಿಕೆ 4515–00–103–3–00–132 (Capital Expenses)) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯಿತಿ ಯೋಜನೆಯಡಿಯಲ್ಲಿ (ಗ್ರಾಮ ಸ್ವರಾಜ್) ಪೇಯಿಸ್ ರಸೀದಿಯ ಮೇಲೆ ಸಂಗ್ರಹಣಾಧಿಕಾರಿಗಳು ಗ್ರಾಮ ಸ್ವರಾಜ್ ಯೋಜನೆಯಡಿ ಡ್ರಾ ಮಾಡಿ Canara Bank Lavelle Road, Bangalore ಇಲ್ಲಿ ತೆರೆದಿರುವ ಉಳಿತಾಯ ಖಾತೆಗೆ ಜಮೆ ಮಾಡಬೇಕು. ಸದರಿ ಬ್ಯಾಂಕಿನ ಮ್ಯಾನೇಜರವರು ಅನುಬಂಧದಲ್ಲಿ ತೋರಿಸಿರುವ ಬ್ಯಾಂಕುಗಳ ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳಿ ಗ್ರಾಮ ಸ್ವರಾಜ್ ಯೋಜನೆಯ ಖಾತೆಗಳಿಗೆ ವರ್ಗಾಯಿಸಲು ತಿಳಿಸಿದೆ.

**ಗ್ರಾಮ ಪಂಚಾಯಿತಿಗಳು ಈ ಅನುದಾನವನ್ನು ಕೆಳಕಂಡ ಷರತ್ತಿಗೊಳಪಟ್ಟು ವಿನಿಯೋಗಿಸತಕ್ಕದ್ದು.**

1. ಯೋಜನಾ ಕಾರ್ಯಾಚರಣೆ ಕೈಪಿಡಿಯ ಪ್ಯಾರಾ 14 ಹಾಗೂ ಅನುಬಂಧ 15 ರಲ್ಲಿ ತೆಗೆದುಕೊಳ್ಳಬಹುದಾದ ಕಾಮಗಾರಿಗಳಿಗೆ ಮಾತ್ರ ವೆಚ್ಚ ಭರಿಸತಕ್ಕದ್ದು.
2. ಆಡಳಿತ ವೆಚ್ಚ, ಧಾರ್ಮಿಕ ಕಟ್ಟಡಗಳು, ಸಮುದಾಯ ಭವನ, ಖಾಸಗಿ ಸಂಸ್ಥೆಗಳಿಗೆ ಸಹಾಯ ಇತ್ಯಾದಿಗಳಿಗೆ ವಿನಿಯೋಗಿಸತಕ್ಕದ್ದಲ್ಲ.
3. ಗ್ರಾಮ ಸಭೆಯಲ್ಲಿ ಅನುಮೋದಿತ 2007–08ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಅಳವಡಿಸಿರುವ ಅರ್ಹ ಕಾರ್ಮಗಾರಿಗಳ ಅನುಷ್ಠಾನಕ್ಕಾಗಿ ಮಾತ್ರ ಖರ್ಚು ಭರಿಸತಕ್ಕದ್ದು.
4. ಶೇ. 20 ರಷ್ಟು ಅನುದಾನವನ್ನು ಕಡ್ಡಾಯವಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಸಮುದಾಯದ ಅಭಿವೃದ್ಧಿಗಾಗಿ ಕ್ರಿಯಾ ಯೋಜನೆಯಲ್ಲಿ ಅಳವಡಿಸಿ ಖರ್ಚು ಭರಿಸತಕ್ಕದ್ದು.
5. ಯೋಜನಾ ಸಂಗ್ರಹಣಾ ಕೈಪಿಯಲ್ಲಿ ತಿಳಿಸಿರುವಂತೆ ಸರಕು, ಕೆಲಸ ಮತ್ತು ಸೇವೆಗಳನ್ನು ನಿರ್ವಹಿಸತಕ್ಕದ್ದು.
6. ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳ ಆಯವ್ಯಯ ಮತ್ತು ಲೆಕ್ಕ ಪತ್ರಗಳು) ನಿಯಮಗಳು 2006 ರ ಪ್ರಕಾರ ಖರ್ಚು ಭರಿಸತಕ್ಕದ್ದು.
7. ಪ್ರತಿ ತಿಂಗಳು ಮಾಸಿಕ ಪ್ರಗತಿ ವರದಿಗಳನ್ನು ಹಾಗೂ ತ್ರೈಮಾಸಿಕ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಆಇ 1038 ವೆಚ್ಚ–6/2007 ದಿನಾಂಕ:3/10/2007ರಲ್ಲಿ ಕಡತ ಸಂಖ್ಯೆ:ಗ್ರಾಅಪ 54 ಗ್ರಾಸ್ವಯೋ 2007ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬೂವನಹಳ್ಳಿ ನಾಗರಾಜ್**

ಸಹಾಯಕ ಅಭಿವೃದ್ಧಿ ಆಯುಕ್ತರು

ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಅನುಬಂಧ**

**ಗ್ರಾಮ ಸ್ವರಾಜ್ ಯೋಜನೆಯಡಿ 2007–08ನೇ ಸಾಲಿಗೆ ಗ್ರಾಮ ಪಂಚಾಯತಿಗಳಿಗೆ ಮುಕ್ತ ಅನುದಾನ (ಬ್ಲಾಕ್ ಅನುದಾನು) ಬಿಡುಗಡೆ ಮಾಡಿದ ವಿವರ (ರೂ. ಲಕ್ಷಗಳಲ್ಲಿ) ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 167 ಗ್ರಾಸ್ವಯೋ 2007, ದಿನಾಂಕ:3ನೇ ಮಾರ್ಚ್ 2008 ರ ಲಗತ್ತು**

**ಜಿಲ್ಲೆ: ಬಳ್ಳಾರಿ** **ತಾಲ್ಲೂಕು ಕೂಡ್ಲಿಗಿ**

| ಕ್ರ. ಸಂ | ಗ್ರಾಮ ಪಂಚಾಯಿತಿ ಹೆಸರು | ಬ್ಯಾಂಕ್‌ನ ಹೆಸರು | ಬ್ಯಾಂಕ್ ಶಾಖೆಯ ಹೆಸರು | ಬ್ಯಾಂಕ್ ಖಾತೆ ಸಂಖ್ಯೆ | ನಿಗಧಿಪಡಿಸಿದ ಅನುದಾನ | ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ |
|---|---|---|---|---|---|---|
| 1 | Banavikallu | Thungabhadra Grameena Bank (Pragathi Grameena Bank) | Banavikallu | 5712 | 8.52 | 4.26 |
| | ಬಿಡುಗಡೆ ಮಾಡಲಾಗಿರುವ ಒಟ್ಟು ಅನುದಾನ | | | | 8.52 | 4.26 |

**ಬೂವನಹಳ್ಳಿ ನಾಗರಾಜ್**

ಪಿ.ಆರ್. 483

ಸಹಾಯಕ ಅಭಿವೃದ್ಧಿ ಆಯುಕ್ತರು

ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ವಿಷಯ:** ಗ್ರಾಮ ಸ್ವರಾಜ್ ಯೋಜನೆಯಡಿ 2007–08ನೇ ಸಾಲಿಗೆ ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಗ್ರಾಮ ಪಂಚಾಯತಿಗಳಿಗೆ ಮೊದಲನೇ ಕಂತಿನ ಮುಕ್ತ ಅನುದಾನ (ಬ್ಲಾಕ್ ಅನುದಾನ) ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಆಳಂದ ತಾಲ್ಲೂಕು ಪಂಚಾಯಿತಿ ಕಾರ್ಯ ನಿರ್ವಾಹಕ ಅಧಿಕಾರಿಗಳ ಪತ್ರ ಸಂಖ್ಯೆ: ತಾಪಂಆ/ ಗ್ರಾಸ್ವಯೋ/2007–08 ದಿನಾಂಕ:ಇಲ್ಲ

**ಪ್ರಸ್ತಾವನೆ:**

ವಿಶ್ವ ಬ್ಯಾಂಕ್ ನೆರವಿನ ಗ್ರಾಮ, ಸ್ವರಾಜ್–ಕರ್ನಾಟಕ ಪಂಚಾಯತ್ ಸಬಲೀಕರಣ ಯೋಜನೆಯಡಿ ಗ್ರಾಮ ಪಂಚಾಯಿತಿಗಳಿಗೆ ಅವು ತಯಾರಿಸಿದ ಯೋಜನಾ ಅಭಿವೃದ್ಧಿ ವರದಿ 2006–12 ರ ಆಧಾರದ ಮೇಲೆ ಐದು ವರ್ಷದ ಅವಧಿಗೆ ಅನುದಾನವನ್ನು ಕಾರ್ಯಾಚರಣೆ ಕೈಪಿಡಿಯ ಮಾರ್ಗಸೂಚಿಗಳನ್ವಯ ಮುಕ್ತ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ. ಈಗಾಗಲೇ ಮಾರ್ಗಸೂಚಿಗಳನ್ವಯ 2006–07ನೇ ಸಾಲಿಗೆ ಅನುದಾನವನ್ನು ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗಿದೆ. ವಿಶ್ವಬ್ಯಾಂಕಿನ 2ನೇ ನಿಯೋಗವು ಒಪ್ಪಿದಂತೆ 2007–08ನೇ ಸಾಲಿನ ಅನುದಾನವನ್ನು ಶೇ. ಎರಡು ಸಮ ಕಂತುಗಳಲ್ಲಿ ಬಿಡುಗಡೆ ಮಾಡಲಾಗುವುದು 2007–08ನೇ ಸಾಲಿಗೆ ನಿಗಧಿಪಡಿಸಿದ ಅನುದಾನದ ಶೇ 50 ರಷ್ಟು ಅನುದಾನವನ್ನು 2006–07ನೇ ಸಾಲಿಗೆ ಬಿಡುಗಡೆ ಮಾಡಲಾದ ಅನುದಾನದಲ್ಲಿ ಶೇ 70 ರಷ್ಟು ಹಣಬಳಕೆ ಮಾಡಿದ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಗುವುದು. ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ 7 ಗ್ರಾಮ ಪಂಚಾಯಿತಿ 2006–07ನೇ ಸಾಲಿನ ಹಣ ಬಳಕೆ ಪ್ರಮಾಣ ಪತ್ರಗಳನ್ನು ಕಾರ್ಯನಿರ್ವಾಹಕ ಅಧಿಕಾರಿಗಳು ಆಳಂದ ಇವರು ಮೇಲೆ ಓದಲಾದ ಪತ್ರದ ಮೂಲಕ ಕಳುಹಿಸಿದ್ದಾರೆ. ಅವುಗಳಲ್ಲಿ 5 ಗ್ರಾಮ ಪಂಚಾಯಿತಿ ಶೇ 70ಕ್ಕೂ ಹೆಚ್ಚು ಅನುದಾನವನ್ನು ಬಳಕೆ ಮಾಡಿವೆ.

ಸದರಿ ಗ್ರಾಮ ಪಂಚಾಯಿತಿಗಳಿಗೆ 2007–08ನೇ ಸಾಲಿನ ಮೊದಲನೇ ಕಂತಿನ ಮುಕ್ತ ಅನುದಾನವನ್ನು ಬಿಡುಗಡೆ ಮಾಡಬಹುದಾಗಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 181 ಗ್ರಾಸ್ವಯೋ 2007, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2008**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ 5 ಗ್ರಾಮ ಪಂಚಾಯಿತಿಗಳಿಗೆ ಇದಕ್ಕೆ ಲಗತ್ತಿಸಿದ ಅನುಬಂಧದಲ್ಲಿ ತಿಳಿಸಿರುವಂತೆ ಒಟ್ಟು ರೂ. 18.75 ಲಕ್ಷಗಳನ್ನು (ರೂಪಾಯಿ ಹದಿನೇಂಟು ಲಕ್ಷದ ಏಪ್ಪತ್ತೈದು ಸಾವಿರ ಮಾತ್ರ) ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ. ಸದರಿ ಹಣವನ್ನು ಲೆಕ್ಕಶೀರ್ಷಿಕೆ 4515–00–103–3–00–132 (Capital Expenses)) ಕರ್ನಾಟಕ ಗ್ರಾಮೀಣ ಬಡತನ ಹಾಗೂ ಪಂಚಾಯಿತಿ ಯೋಜನೆಯಡಿಯಲ್ಲಿ (ಗ್ರಾಮ ಸ್ವರಾಜ್) ಪೇಯಿಸ್ ರಶೀದಿಯ ಮೇಲೆ ಸಂಗ್ರಹಣಾಧಿಕಾರಿಗಳು ಗ್ರಾಮ ಸ್ವರಾಜ್ ಯೋಜನೆಯಡಿ ಡ್ರಾ ಮಾಡಿ State Bank of India, Bangalore ಇಲ್ಲಿ ತೆರೆದಿರುವ ಉಳಿತಾಯ ಖಾತೆಗೆ ಜಮೆ ಮಾಡಬೇಕು. ಸದರಿ ಬ್ಯಾಂಕಿನ ಮ್ಯಾನೇಜರವರು ಅನುಬಂಧದಲ್ಲಿ ತೋರಿಸಿರುವ ಬ್ಯಾಂಕುಗಳ ಸಂಬಂರ್ಧಪಟ್ಟ ಗ್ರಾಮ ಪಂಚಾಯಿತಿಗಳ ಗ್ರಾಮ ಸ್ವರಾಜ್ ಯೋಜನೆಯ ಖಾತೆಗಳಿಗೆ ವರ್ಗಾಯಿಸಲು ತಿಳಿಸಿದೆ.

**ಗ್ರಾಮ ಪಂಚಾಯಿತಿಗಳು ಈ ಅನುದಾನವನ್ನು ಕೆಳಕಂಡ ಷರತ್ತಿಗೊಳಪಟ್ಟು ವಿನಿಯೋಗಿಸತಕ್ಕದ್ದು.**

1. ಯೋಜನಾ ಕಾರ್ಯಾಚರಣೆ ಕೈಪಿಡಿಯ ಪ್ಯಾರಾ 14 ಹಾಗೂ ಅನುಬಂಧ 15 ರಲ್ಲಿ ತೆಗೆದುಕೊಳ್ಳಬಹುದಾದ ಕಾಮಗಾರಿಗಳಿಗೆ ಮಾತ್ರ ವೆಚ್ಚ ಭರಿಸತಕ್ಕದ್ದು.
2. ಆಡಳಿತ ವೆಚ್ಚ, ಧಾರ್ಮಿಕ ಕಟ್ಟಡಗಳು, ಸಮುದಾಯ ಭವನ, ಖಾಸಗಿ ಸಂಸ್ಥೆಗಳಿಗೆ ಸಹಾಯ ಇತ್ಯಾದಿಗಳಿಗೆ ವಿನಿಯೋಗಿಸತಕ್ಕದ್ದಲ್ಲ.
3. ಗ್ರಾಮ ಸಭೆಯಲ್ಲಿ ಅನುಮೋದಿತ 2007–08ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಅಳವಡಿಸಿರುವ ಅರ್ಹ ಕಾರ್ಮಗಾರಿಗಳ ಅನುಷ್ಠಾನಕ್ಕಾಗಿ ಮಾತ್ರ ಖರ್ಚು ಭರಿಸತಕ್ಕದ್ದು.
4. ಶೇ. 20 ರಷ್ಟು ಅನುದಾನವನ್ನು ಕಡ್ಡಾಯವಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಸಮುದಾಯದ ಅಭಿವೃದ್ಧಿಗಾಗಿ ಕ್ರಿಯಾ ಯೋಜನೆಯಲ್ಲಿ ಅಳವಡಿಸಿ ಖರ್ಚು ಭರಿಸತಕ್ಕದ್ದು.
5. ಯೋಜನಾ ಸಂಗ್ರಹಣಾ ಕೈಪಿಯಲ್ಲಿ ತಿಳಿಸಿರುವಂತೆ ಸರಕು, ಕೆಲಸ ಮತ್ತು ಸೇವೆಗಳನ್ನು ನಿರ್ವಹಿಸತಕ್ಕದ್ದು.
6. ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳ ಆಯವ್ಯಯ ಮತ್ತು ಲೆಕ್ಕ ಪತ್ರಗಳು) ನಿಯಮಗಳು 2006 ರ ಪ್ರಕಾರ ಖರ್ಚು ಭರಿಸತಕ್ಕದ್ದು.
7. ಪ್ರತಿ ತಿಂಗಳು ಮಾಸಿಕ ಪ್ರಗತಿ ವರದಿಗಳನ್ನು ಹಾಗೂ ತ್ರೈಮಾಸಿಕ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ ಆಇ 1038 ವೆಚ್ಚ–6/2007 ದಿನಾಂಕ:3/10/2007ರಲ್ಲಿ ಕಡತ ಸಂಖ್ಯೆ:ಗ್ರಾಅಪ 54 ಗ್ರಾಸ್ವಯೋ 2007ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬೂವನಹಳ್ಳಿ ನಾಗರಾಜ್**

ಸಹಾಯಕ ಅಭಿವೃದ್ಧಿ ಆಯುಕ್ತರು
ಹಾಗೂ ಸರ್ಕಾರದ ಪದನಿಮಿತ್ತ ಅಧೀನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಅನುಬಂಧ**

**ಗ್ರಾಮ ಸ್ವರಾಜ್ ಯೋಜನೆಯಡಿ 2007–08ನೇ ಸಾಲಿಗೆ ಗ್ರಾಮ ಪಂಚಾಯತಿಗಳಿಗೆ ಮುಕ್ತ ಅನುದಾನ (ಬ್ಲಾಕ್ ಅನುದಾನ) ಬಿಡುಗಡೆ ಮಾಡಿದ ವಿವರ (ರೂ. ಲಕ್ಷಗಳಲ್ಲಿ) ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 189 ಗ್ರಾಸ್ವಯೋ 2007, ದಿನಾಂಕ: 3ನೇ ಮಾರ್ಚ್ 2008 ರ ಲಗತ್ತು**

**ಜಿಲ್ಲೆ: ಗುಲ್ಬರ್ಗಾ** **ತಾಲ್ಲೂಕು :ಆಳಂದ**

**(ರೂಪಾಯಿ ಲಕ್ಷಗಳಲ್ಲಿ)**

| ಕ್ರ. ಸಂ | ಗ್ರಾಮ ಪಂಚಾಯಿತಿ ಹೆಸರು | ಬ್ಯಾಂಕ್‌ನ ಹೆಸರು | ಬ್ಯಾಂಕ್ ಶಾಖೆಯ ಹೆಸರು | ಬ್ಯಾಂಕ್ ಖಾತೆ ಸಂಖ್ಯೆ | ನಿಗಧಿಪಡಿಸಿದ ಅನುದಾನ | ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ |
|---|---|---|---|---|---|---|
| 1 | Nimbarga | State Bank of India | Nimbarga | 30129732764 | 7.75 | 3.87 |
| 2 | Khajuri | Krishna Grameena Bank | Khajuri | 6204 | 7.50 | 3.75 |

ಸಿಂಡಿಕೇಟ್ ಸಭೆಯು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ಕಾಲೇಜನ್ನು ವಿಶ್ವವಿದ್ಯಾಲಯದ ವಶಕ್ಕೆ ತೆಗೆದುಕೊಳ್ಳಲು ಅನುಮೋದನೆಯನ್ನು ನೀಡಿರುತ್ತದೆಯೆಂದು ತಿಳಿಸುತ್ತಾ ಈ ವಿಷಯದಲ್ಲಿ ಸರ್ಕಾರವು ಮುಂದಿನ ಕ್ರಮವನ್ನು ಜರುಗಿಸುವಂತೆ ಕೋರಿರುತ್ತಾರೆ.

ಉಲ್ಲೇಖ (2) ರಲ್ಲಿರುವ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಶಿವಮೊಗ್ಗ ಜಿಲ್ಲಾ ಜಂಟಿನಿರ್ದೇಶಕರು ದಿ 13–2–2007 ರಂದು ಸದರಿ ಕಾಲೇಜಿಗೆ ಭೇಟಿ ನೀಡಿ ಕಾಲೇಜಿನ ಆಡಳಿತ ಮಂಡಳಿಯ ವಿವರಗಳು, ಚರಾಸ್ತಿ, ಜಂಟಿ ಖಾತೆ, ಕಾಲೇಜಿನ ಖಾತೆಗಳ ಇವರ, ನ್ಯಾಯಾಲಯದಲ್ಲಿನ ಪ್ರಕರಣಗಳ ಬಗ್ಗೆ ಕಾಲೇಜು ನಿರ್ವಹಣೆ, ಸಿಬ್ಬಂದಿ ನಿರ್ವಹಣೆ ಈ ಬಗ್ಗೆ ವಿವರವಾದ ವರದಿಯನ್ನು ಸಲ್ಲಿಸಿದ್ದು ಅದನ್ನು ಯಥಾವತ್ತಾಗಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಸದರಿ ವರದಿಯಲ್ಲಿ ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಬಿ.ಆರ್. ಪ್ರಾಜೆಕ್ಟ್ ನಲ್ಲಿರುವ ಶ್ರೀಮದ್ ರಂಭಾಪುರಿ ಕಲಾ ಮತ್ತು ವಾಣಿಜ್ಯ ಕಾಲೇಜು ಗ್ರಾಮೀಣ ಪ್ರದೇಶದಲ್ಲಿದ್ದು ಕುವೆಂಪು ವಿಶ್ವವಿದ್ಯಾಲಯದ ಆವರಣಕ್ಕೆ ಹೊಂದಿಕೊಂಡಿರುತ್ತದೆ. ಸದರಿ ವಿದ್ಯಾಸಂಸ್ಥೆಯನ್ನು ಗೋಡೆಗೆರೆ ಚಿಕ್ಕನಾಯಕಹಳ್ಳಿ ತುಮಕೂರು ಜಿಲ್ಲೆ ಇವರು ತುಮಕೂರು ಜಿಲ್ಲಾ ನೊಂದಣಾಧಿಕಾರಿಗಳು ಇವರಲ್ಲಿ 19–1–1984 ರಂದು ನೊಂದಣಿ ಮಾಡಿಸಲಾಗಿರುತ್ತದೆ. ಸದರಿ ಕಾಲೇಜು 2.0 ಎಕರೆ 20 ಗುಂಟೆ ಜಮೀನನ್ನು ಸಿಂಗನಮನೆ ಗ್ರಾಮದ ಸರ್ವೆ ನಂ. 16/3 ರಲ್ಲಿ ಹೊಂದಿದ್ದು ಆಸ್ತಿಯು ಪಟೇಲ್ ಸಿದ್ದಲಿಂಗಪ್ಪ ಬಿನ್ ಸಿದ್ದಪ್ಪ ಇವರ ಹೆಸರಿನಲ್ಲಿದ್ದುಮ, ಸದರಿಯವರು ಶ್ರೀಮದ್ ರಂಭಾಪುರಿ ವಿದ್ಯಾಸಂಸ್ಥೆಗೆ ದಿ:3–7–1998 ರಂದು ದಾನವಾಗಿ ನೀಡಿರುವುದಾಗಿಯೂ ಸದರಿ ಆಸ್ತಿಯ ಬಗ್ಗೆ ಯಾವುದೇ ನ್ಯಾಯಾಲಯದ ಪ್ರಕರಣಗಳು ಇರುವುದಿಲ್ಲವೆಂದು ದಿ:16–12–2006 ರಂದು ಶ್ರೀಮದ್ ರಂಭಾಪುರ ವಿದ್ಯಾಸಂಸ್ಥೆಯ ಅಧ್ಯಕ್ಷರಾದ ಶ್ರೀ ಶ್ರೀ ಶ್ರೀ ಸಿದ್ದರಾಮ ದೇಶಿಕೇಂದ್ರ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ಪ್ರಸ್ತುತ ಹಾಲಿ ಇರುವ ಹೆಸರನ್ನೇ ಉಳಿಸಿಕೊಳ್ಳುವ ಷರತ್ತಿಗೊಳಪಟ್ಟು ಕಾಲೇಜನ್ನು ವಿಶ್ವವಿದ್ಯಾಲಯಕ್ಕೆ ವಹಿಸಿಕೊಡಲು ತೀರ್ಮಾನಿಸಿರುತ್ತಾರೆ ಎಂದು ತಿಳಿಸುತ್ತಾ ಕಾಲೇಜಿಗೆ ಸಂಬಂಧಿಸಿದಂತೆ ಚರಾಸ್ತಿ ಕಾಲೇಜಿನ ಸಂಯೋಜನೆ ಬಗ್ಗೆ ಮತ್ತು ಸಂಯೋಜನೆ ನವೀಕರಣದ ಬಗ್ಗೆ ಕಾಲೇಜಿನ ಕಟ್ಟಡಗಳ ವಿವರಗಳ ಬಗ್ಗೆ ಆಟದ ಮೈದಾನ ಇತರೆ ಮೂಲಭುತ ಸೌಕರ್ಯಗಳ ಬಗ್ಗೆ ಕಾಲೇಜು ವೇತನಾನುದಾನಕ್ಕೆ ಒಳಪಟ್ಟ ವಿವರಗಳ ಬಗ್ಗೆ ಬೋಧಕ/ಬೋಧಕೇತರ ಸಿಬ್ಬಂದಿ ವಿವರಗಳು ವೇತನಾನುದಾನದ ವಿವರಗಳು ಗ್ರಂಥಾಲಯ, ಕ್ರೀಡಾ ವಿಭಾಗ, ವಿದ್ಯಾರ್ಥಿಗಳ ಸಂಖ್ಯೆ ವಿವರಗಳನ್ನು ನೀಡುತ್ತಾ ಸದರಿ ಕಾಲೇಜನ್ನು ವಿಶ್ವವಿದ್ಯಾಲಯದ ಅಧೀನಕ್ಕೆ ತೆಗದುಕೊಳ್ಳುವ ಬಗ್ಗೆ. ವಿವರಗಳನ್ನು ಸಲ್ಲಿಸುತ್ತಾ ಒಟ್ಟಾರೆಯಾಗಿ ಸದರಿ ಕಾಲೇಜಿನಲ್ಲಿ ಮೂಲಭೂತ ಸೌಕರ್ಯಗಳ ಕೊರತೆಯಿದ್ದು ಸಿಬ್ಬಂದಿ ವರ್ಗ ವಿದ್ಯಾರ್ಥಿಗಳು ಹಾಗೂ ಸ್ಥಳೀಯ ಮುಖಂಡರುಗಳು ಕಾಲೇಜನ್ನು ಕುವೆಂಪು ವಿಶ್ವವಿದ್ಯಾಲಯದ ಅಧೀನಕ್ಕೆ ವಹಿಸಿಕೊಳ್ಳಲು ಒತ್ತಾಯಿಸುತ್ತಿರುವ ಹಿನ್ನಲೆಯಲ್ಲಿ ಹಾಗೂ ಆಡಳಿತ ಮಂಡಳಿಯು ಆರ್ಥಿಕ ಮುಗ್ಗಟ್ಟಿನಿಂದ ಕಾಲೇಜನ್ನು ನಿರ್ವಹಿಸಲು ಕಷ್ಟಕರವಾಗಿದೆಯೆಂದು ತಿಳಿಸಿರುವ ಹಿನ್ನಲೆಯಲ್ಲಿ ಹಾಗೂ ಕುವೆಂಪು ವಿಶ್ವವಿದ್ಯಾಲಯದ ಸಿಂಡಿಕೇಟ್ ಸಹ ವಿಶ್ವವಿದ್ಯಾಲಯದ ನೇರ ಆಡಳಿತಕ್ಕೆ ತೆಗೆದುಕೊಳ್ಳಲು ನಿರ್ಣಯಿಸಿರುವುದರಿಂದ ಸದರಿ ಕಾಲೇಜನ್ನು ಕುವೆಂಪು ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ವಹಿಸಬಹುದಾಗಿದೆಯೆಂದು ಅಭಿಪ್ರಾಯಪಟ್ಟಿರುತ್ತಾರೆ. ಸದರಿ ಕಾಲೇಜನ್ನು ವಿಶ್ವವಿದ್ಯಾಲಯದ ನೇರ ಆಡಳಿತಕ್ಕೆ ಒಳಪಡಿಸುವುದರಿಂದ ವಿಶ್ವವಿದ್ಯಾಲಯಕ್ಕೆ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗೆ ವೇತನ ಬಿಡುಗಡೆ ಬಾಬು ವಾರ್ಷಿಕವಾರು ರೂ. 70.00 ಲಕ್ಷಗಳ ಅಂದಾಜು ವೆಚ್ಚ ತಗಲಬಹುದೆಂದು ತಿಳಿಸಲಾಗಿರುತ್ತದೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 115 ಯುಎಸ್‌ವಿ 2006, ಬೆಂಗಳೂರು, ದಿನಾಂಕ:12ನೇ ಫೆಬ್ರವರಿ 2008**

ಮೇಲೆ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಬಿ.ಆರ್. ಪ್ರಾಜೆಕ್ಟ್ ಶಂಕರಘಟ್ಟದಲ್ಲಿರುವ ಶ್ರೀಮದ್ ರಂಭಾಪುರಿ ಕಲಾ ಮತ್ತು ವಾಣಿಜ್ಯ ಕಾಲೇಜನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಕುವೆಂಪು ವಿಶ್ವವಿದ್ಯಾಲಯದ ನೇರ ಆಡಳಿತ ವ್ಯಾಪ್ತಿಗೆ ಒಳಪಡಿಸಲು ಸರ್ಕಾರವು ಅನುಮೋದನೆಯನ್ನು ನೀಡಿರುತ್ತದೆ.

ಷರತ್ತುಗಳು:

1. ಕಾಲೇಜಿಗೆ ಸಂಬಂಧಿಸಿದಂತೆ ಇರುವ ಸ್ಥಿರಾಸ್ತಿಯನ್ನು ಅಂದರೆ, ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಸಿಂಗನಮನೆ ಗ್ರಾಮದ ಸರ್ವೆ ನಂ 16/3 ಕ್ಕೆ ಹೊಂದಿಕೊಂಡಿರುವ 2 ಎಕರೆ 20 ಗುಂಟೆ ವಿಸ್ತೀರ್ಣದ ಭೂಮಿಯನ್ನು ಅದರಲ್ಲಿ ನಿರ್ಮಿಸಲಾಗಿರುವ ಕಟ್ಟಡಗಳ ಮರ ಗಿಡ ಇತ್ಯಾದಿಗಳ ಸಮೇತ ಕುವೆಂಪು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸುವುದು.
2. ಸದರಿ ಕಾಲೇಜಿಗೆ ಸಂಬಂಧಿಸಿದಂತೆ ಎಲ್ಲಾ ಕಟ್ಟಡಗಳು, ಪೀಠೋಪಕರಣಗಳು, ಗ್ರಂಥಾಲಯ ಇತ್ಯಾದಿಗಳನ್ನು ಕುವೆಂಪು ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ಹಸ್ತಾಂತರಿಸುವುದು.
3. ಕಾಲೇಜಿನ ಹಸ್ತಾಂತರದ ನಂತರ ಈಗಾಗಲೇ ನಿರ್ಣಯಿಸಿದಂತೆ ಕಾಲೇಜಿನ ಹೆಸರನ್ನು ಯಥಾವತ್ತಾಗಿ ಮುಂದುವರೆಸುವುದು.

4. ಕಾಲೇಜು ಶಿಕ್ಷಣ ಆಯುಕ್ತರು ಸಲ್ಲಿಸಿರುವ ವರದಿಯಲ್ಲಿ ಇರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಹೊರತುಪಡಿಸಿ ಬೇರೆ ಯಾವ ಸಿಬ್ಬಂದಿಯನ್ನು ಕುವೆಂಪು ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ವರ್ಗಾಯಿಸತಕ್ಕದ್ದಲ್ಲ.
5. ಸದರಿ ಕಾಲೇಜನ್ನು ಕುವೆಂಪು ವಿಶ್ವವಿದ್ಯಾಲಯದ ನೇರ ಆಡಳಿತಕ್ಕೆ ಒಳಪಡಿಸುವುದರಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ವಿಶ್ವವಿದ್ಯಾಲಯವು ತನ್ನ ಆಂತರಿಕ ಸಂಪನ್ಮೂಲಗಳಿಂದ ಮತ್ತು ವಿಶ್ವವಿದ್ಯಾಲಯಕ್ಕೆ ನೀಡಲಾಗುವ ಬ್ಲಾಕ್ ಅನುದಾನದ ಇತಿಮಿತಿಯಲ್ಲಿಯೇ ಸರಿದೂಗಿಸತಕ್ಕದ್ದು. ಈ ಸಂಬಂಧ ಸರ್ಕಾರವು ಯಾವುದೇ ಅಧಿಕ ಅನುದಾನವನ್ನು ಬಿಡುಗಡೆ ಮಾಡುವುದಿಲ್ಲ.
6. ಸದರಿ ಕಾಲೇಜಿನಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸೇವಾ ಪುಸ್ತಕಗಳು ಮತ್ತಿತರ ದಾಖಲೆಗಳನ್ನು ಕಾಲೇಜು ಶಿಕ್ಷಣ ಇಲಾಖೆಯಿಂದ ಪಡೆದು ದಾಖಲೆಗಳನ್ನು ಪರಿಶೀಲಿಸದ ನಂತರ ವೇತನ/ವೇತನ ಶ್ರೇಣಿಯನ್ನು ಕುವೆಂಪು ವಿಶ್ವವಿದ್ಯಾಲಯವು ನಿಗಧಿಪಡಿಸತಕ್ಕದ್ದು.
7. ಸದರಿ ಕಾಲೇಜಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯು ಕುವೆಂಪು ವಿಶ್ವವಿದ್ಯಾಲಯದಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸೇವಾ ಹಿರಿತನದ ಜ್ಯೇಷ್ಠತೆಯಲ್ಲಿ ಕೊನೆಯವರಾಗಿ ನಮೂದಿಸತಕ್ಕದ್ದು.
8. ಸದರಿ ಕಾಲೇಜಿನಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಮತು ಬೋಧಕೇತರ ಸಿಬ್ಬಂದಿಗಳ ವೇತನವನ್ನು ಕುವೆಂಪು ವಿಶ್ವವಿದ್ಯಾಲಯವು ಸದರಿ ಕಾಲೇಜನ್ನು ತನ್ನ ನೇರ ಆಡಳಿತ ವ್ಯಾಪ್ತಿಗೆ ಒಳಪಡಿಸಿಕೊಂಡ ದಿನಾಂಕದಿಂದ ಅನ್ವಯವಾಗುವಂತೆ ನೀಡತಕ್ಕದ್ದು.
9. ಸದರಿ ಕಾಲೇಜು ವೇತನ ಅನುದಾನಕ್ಕೆ ಒಳಪಟ್ಟಿರುವ ಬಗ್ಗೆ ಮತ್ತು ವಾರ್ಷಿಕ ಹಾಗೂ ಮಾಸಿಕವಾಗಿ ಸರ್ಕಾರದಿಂದ ನೀಡಲಾಗುತ್ತಿರುವ ಅನುದಾನದ ವಿವರಗಳನ್ನು ಕಾಲೇಜು ಶಿಕ್ಷಣ ಜಂಟಿ ನಿರ್ದೇಶಕರಿಂದ ಪಡೆದು ಮುಂದಿನ ಅಗತ್ಯ ಕ್ರಮವನ್ನು ಕುವೆಂಪು ವಿಶ್ವವಿದ್ಯಾಲಯವು ಜರುಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 1247 ವೆಚ್ಚ–8/2007, ದಿನಾಂಕ:30–1–2008 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿರುತ್ತದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 327

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ವಿಷಯ:** ಕುವೆಂಪು ವಿಶ್ವವಿದ್ಯಾಲಯದಲ್ಲಿ ಹಂಗಾಮಿ ನೌಕರರ ಸಕ್ರಮಾತಿ ಬಗ್ಗೆ.

**ಓದಲಾಗಿದೆ:** 1. ಕುವೆಂಪು ವಿಶ್ವವಿದ್ಯಾಲಯದ ಸಿಂಡಿಕೇಟಿನ ದಿನಾಂಕ:16–1–2006ರ ನಡವಳಿ

2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ:ಇಡಿ 135 ಯುಎಸ್‌ವಿ 2004 (ಭಾಗ), ದಿನಾಂಕ:13.3.2006

3. ಸರ್ಕಾರಿ ಆದೇಶ ಸಂಖ್ಯೆ:ಇಡಿ 04 ಯುಎಸ್‌ವಿ 2007, ದಿನಾಂಕ:28.12.2007

4. ಕುಲಸಚಿವರು, ಕುವೆಂಪು ವಿಶ್ವವಿದ್ಯಾಲಯ, ಇವರ ಪತ್ರ ಸಂಖ್ಯೆ:ಕುವಿ/ಮಾಸನಿ–2/8907/2007–08, ದಿನಾಂಕ:31–12–2007.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿರುವ ಕುವೆಂಪು ವಿಶ್ವವಿದ್ಯಾಲಯದ ನಡವಳಿಯಲ್ಲಿ ಕುವೆಂಪು ವಿಶ್ವವಿದ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ 133 ಹಂಗಾಮಿ ನೌಕರರುಗಳ ಸೇವೆಯನ್ನು ಸರ್ಕಾರದ ಅಂತಿಮ ಆದೇಶಕ್ಕೊಳಪಟ್ಟು ವಿಲೀನಗೊಳಿಸಲು ಕುವೆಂಪು ವಿಶ್ವವಿದ್ಯಾಲಯದ ಸಿಂಡಿಕೇಟ್ ದಿನಾಂಕ:16–1–2006 ರಂದು ಜರುಗಿದ 11ನೇ ಸಾಮಾನ್ಯ ಸಭೆಯಲ್ಲಿ ವಿಷಯ ಸಂಖ್ಯೆ:ಸಿಂ2–06.11.01.07ನ(ಆ) ರಲ್ಲಿ ನಿರ್ಣಯವನ್ನು ತೆಗೆದುಕೊಂಡಿತ್ತು.

ಉಲ್ಲೇಖ(2) ರಲ್ಲಿರುವ ನೋಟೀಸಿನಲ್ಲಿ ಸರ್ಕಾರವು ಕುವೆಂಪು ವಿಶ್ವವಿದ್ಯಾಲಯದ ಮೇಲ್ಕಂಡ ದಿನಾಂಕ: 16–1–2006ರ ಸಿಂಡಿಕೇಟಿನ ನಿರ್ಣಯವನ್ನು ಏಕೆ ರದ್ದುಗೊಳಿಸಬಾರದು ಎಂದು ಕೆ.ಎಸ್.ಯು. ಅಧಿನಿಯಮ 2000ದ ಪ್ರಕರಣ 10(1) ರಡಿಯಲ್ಲಿ ಪ್ರದತ್ತವಾದ ಅಧಿಕಾರದಡಿ ಕಾರಣ ಕೇಳುವ ನೋಟೀಸ್‌ನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ನೀಡಿತ್ತು.

ಉಲ್ಲೇಖ (3) ರಲ್ಲಿರುವ ದಿನಾಂಕ:28–12–2007ರ ಸರ್ಕಾರಿ ಆದೇಶದಲ್ಲಿ ಕುವೆಂಪು ವಿಶ್ವವಿದ್ಯಾಲಯದ ದಿ: 16–1–2006ರ ಸಿಂಡಿಕೇಟಿನ 11ನೇ ಸಾಮಾನ್ಯ ಸಭೆಯಲ್ಲಿ ವಿಷಯ ಸಂಖ್ಯೆ:ಸಿಂ 2–06.11.01.07ನ (ಅ) ರಲ್ಲಿ ತೆಗೆದುಕೊಂಡ ನಿರ್ಣಯವನ್ನು ರದ್ದುಗೊಳಿಸಲಾಗಿತ್ತು.

ಉಲ್ಲೇಖ (4) ರಲ್ಲಿರುವ ಪತ್ರದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರು ವಿಶ್ವವಿದ್ಯಾಲಯದಲ್ಲಿ ಒಟ್ಟು 787 ಬೋಧಕೇತರ ಹುದ್ದೆಗಳಿದ್ದು ಈ ಹುದ್ದೆಗಳಿಗೆ ದಿನಾಂಕ:2–12–1992 ಮತ್ತು 16–5–1995 ರಲ್ಲಿ ನೇರ ನೇಮಕಾತಿಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು ಮತ್ತು ಒಟ್ಟು 227 ಹುದ್ದೆಗಳಿಗೆ ನೇರ ನೇಮಕಾತಿ ಮಾಡಲಾಗಿತ್ತು. ತದನಂತರ ಬೋಧಕೇತರ ಹುದ್ದೆಗಳ ನೇಮಕಾತಿಗೆ ಆರ್ಥಿಕ ಮಿತವ್ಯಯದ ಕಾರಣ ಸರ್ಕಾರದ ನಿಷೇಧ ಜಾರಿಯಿದ್ದ ಕಾರಣ ಬೋಧಕೇತರ ಹುದ್ದೆಗಳಿಗೆ 1976ರ ಕೆ.ಎಸ್.ಯು ಅಧಿನಿಯಮದ ಪ್ರಕರಣ 51(ಬಿ) ಅಡಿಯಲ್ಲಿ ನಿಯಮಾನುಸಾರವಾಗಿ ಹಂಗಾಮಿಯಾಗಿ 133 ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳಲಾಗಿತ್ತು. ಈ ರೀತಿ ನೇಮಕಗೊಂಡಿದ್ದ ಹಂಗಾಮಿ ನೌಕರರು ತಮ್ಮ ಸೇವೆಯನ್ನು ಖಾಯಂಗೊಳಿಸುವಂತೆ ವಿಶ್ವವಿದ್ಯಾಲಯಕ್ಕೆ ಮನವಿಗಳನ್ನು ಸಲ್ಲಿಸಿದ್ದು ಅದನ್ನು ಕೂಲಂಕುಷವಾಗಿ ಪರಿಶೀಲಿಸಿ ವಿಶ್ವವಿದ್ಯಾಲಯವು ದಿ:16–1–2006ರ ಸಿಂಡಿಕೇಟಿನ 11ನೇ ಸಾಮಾನ್ಯ ಸಭೆಯಲ್ಲಿ ವಿಷಯ ಸಂಖ್ಯೆ:ಸಿಂ 2–06.11.01.07ನ (ಅ) ರಲ್ಲಿ ಒಟ್ಟು 131 ಹಂಗಾಮಿ ನೌಕರರ ಸೇವೆಯನ್ನು ವಿಶ್ವವಿದ್ಯಾಲಯದಲ್ಲಿ ಮಂಜೂರಾಗಿದ್ದ ಬೋಧಕೇತರ ಹುದ್ದೆಗಳಲ್ಲಿ ಖಾಲಿ ಹುದ್ದೆಗಳಿಗೆ ಎದುರಾಗಿ ಖಾಯಂಗೊಳಿಸಲಾಗಿತ್ತು. ಈ ರೀತಿ ಖಾಯಂಗೊಳಿಸಲಾಗಿದ್ದ ನೌಕರರು ಆಯಾ ಹುದ್ದೆಗಳಿಗೆ ನಿಯಮಾನುಸಾರವಾಗಿ ನಿಗದಿಯಾದ ವಿದ್ಯಾರ್ಹತೆ, ಕಾರ್ಯಾನುಭವ ಹೊಂದಿರುತ್ತಾರೆ. ಸದರಿ ನೌಕರರನ್ನು ಹಂಗಾಮಿಯಾಗಿ ವಿಶ್ವವಿದ್ಯಾಲಯದ ಸೇವೆಗೆ ತೆಗೆದುಕೊಳ್ಳುವಾಗ ಸರ್ಕಾರದ ಮೀಸಲಾತಿ ನಿಯಮಾವಳಿಯನುಸಾರ (ಕೆಲವು ವೃಂದಗಳಲ್ಲಿ ಮೀಸಲಾತಿ ಅನ್ವಯ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದ ಸಂದರ್ಭವನ್ನು ಹೊರತುಪಡಿಸಿ) ನೇಮಕಾತಿ ಮಾಡಿಕೊಳ್ಳಲಾಗಿದ್ದು ಅದರಂತೆ ಸಿಂಡಿಕೇಟ್‌ನ ನಿರ್ಣಯದ ಪ್ರಕಾರ ವಿಶ್ವವಿದ್ಯಾಲಯದ ಸೇವೆಯಲ್ಲಿ ವಿಲೀನಗೊಳಿಸಲಾಗಿದೆಯೆಂದು ತಿಳಿಸಿರುತ್ತಾರೆ. ಅಲ್ಲದೆ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಹಾಗೂ ಇತರೆ ವಿಶ್ವವಿದ್ಯಾಲಯಗಳಲ್ಲಿ ಹಂಗಾಮಿ/ದಿನಗೂಲಿ ನೌಕರರುಗಳ ಸೇವೆಯನ್ನು ಖಾಯಂಗೊಳಿಸಿರುವ ರೀತಿಯಲ್ಲಿ ಕುವೆಂಪು ವಿಶ್ವವಿದ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹಂಗಾಮಿ ನೌಕರರು ನೇರ ನೇಮಕಾತಿಗೆ ನಿಗದಿಯಾಗಿರುವ ವಯಸ್ಸು ದಾಟಿರುವುದರಿಂದ ಹಾಗೂ ಇದೇ ಹುದ್ದೆಯಲ್ಲಿ ದೀರ್ಘಕಾಲದ ಪ್ರಾಮಾಣಿಕ ಮತ್ತು ತೃಪ್ತಿಕರ ಸೇವೆಯನ್ನು ಪರಿಗಣಿಸಿ ನೇರ ನೇಮಕಾತಿಗೆ ಸರ್ಕಾರದ ನಿಷೇಧ ಜಾರಿಯಲ್ಲಿದ್ದ ಹಿನ್ನಲೆಯಲ್ಲಿ ಸರ್ಕಾರದ ಪೂರ್ವಾನುಮತಿಯನ್ನು ನಿರೀಕ್ಷಿಸಿ 131 ಹಂಗಾಮಿ ನೌಕರರ ಸೇವೆಯನ್ನು ವಿಶ್ವವಿದ್ಯಾಲಯದ ಸೇವೆಯಲ್ಲಿ ವಿಲೀನಗೊಳಿಸಲಾಗಿದ್ದು ಈ ನೌಕರರ ಭವಿಷ್ಯದ ಹಿತದೃಷ್ಟಿಯಿಂದ ವಿಶ್ವವಿದ್ಯಾಲಯವು ತೆಗೆದುಕೊಂಡಿರುವ ಕ್ರಮಕ್ಕೆ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಹೊರಡಿಸಿದ ಸುತ್ತೋಲೆ ಸಂಖ್ಯೆ:ಡಿಪಿಎಆರ್ 25 ಎಸ್‌ಎಲ್‌ಸಿ 2003, ದಿ:25–5–2006ರ ಅಡಿಯಲ್ಲಿ ಹಾಗೂ ಸರ್ವೋಚ್ಚ ನ್ಯಾಯಾಲಯದ ದಿನಾಂಕ:10–4–2006ರ ತೀರ್ಪಿನನ್ವಯ ಕೂಲಂಕುಷವಾಗಿ ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 04 ಯುಎಸ್‌ವಿ 2007, ಬೆಂಗಳೂರು, ದಿನಾಂಕ:13ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು ಉಲ್ಲೇಖ (2)ರ ದಿನಾಂಕ:13–3–2006 ರಂದು ಕೆ.ಎಸ್.ಯು. ಅಧಿನಿಯಮ 2000ದ ಪ್ರಕರಣ 10(1)ರಡಿಯಲ್ಲಿ ಪ್ರದತ್ತವಾದ ಅಧಿಕಾರದಡಿ ಹೊರಡಿಸಿದ್ದ ಕಾರಣ ಕೇಳುವ ನೋಟೀಸನ್ನು ಹಾಗೂ ಕುವೆಂಪು ವಿಶ್ವವಿದ್ಯಾಲಯವು ದಿ:16–1–2006ರ ಸಿಂಡಿಕೇಟಿನ 11ನೇ ಸಾಮಾನ್ಯ ಸಭೆಯಲ್ಲಿ ವಿಷಯ ಸಂಖ್ಯೆ:ಸಿಂ2–06.11.01.07ನ (ಅ) ರಲ್ಲಿ ತೆಗೆದುಕೊಂಡ ನಿರ್ಣಯವನ್ನು ಅನೂರ್ಜಿತಗೊಳಿಸಿ ಹೊರಡಿಸಲಾಗಿದ್ದ ಉಲ್ಲೇಖ (3)ರ ದಿನಾಂಕ:28–12–2007ರ ಸರ್ಕಾರಿ ಆದೇಶವನ್ನು ಹಿಂಪಡೆಯಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 328

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ವಿಷಯ:** 2007–08ನೇ ಶೈಕ್ಷಣಿಕ ಸಾಲಿಗೆ ಬೆಳಗಾವಿ ಜಿಲ್ಲೆ ರಾಯಬಾಗದ ಶಿಕ್ಷಣ ಪ್ರಸಾರಕ ಮಂಡಳದ ಶಿಕ್ಷಣ ಮಹಾವಿದ್ಯಾಲಯದ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಉಲ್ಲೇಖ:** 1. ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ:ಇಡಿ 183 ಯುಕೆವಿ 2005, ದಿ:5–1–2006
2. ಎನ್.ಸಿ.ಟಿ.ಇ ಪತ್ರ ಸಂಖ್ಯೆ: F. SRO /NCTE 2007–08/15927, ದಿನಾಂಕ:12–12–2007
3. ಸಂಸ್ಥೆಯ ಕಾರ್ಯದರ್ಶಿಗಳ ಪತ್ರ ದಿನಾಂಕ:12–12–2007

**ಪೀಠಿಕೆ:**

ಸರ್ಕಾರಿ /ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಆಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆ ರಾಯಬಾಗದ ಶಿಕ್ಷಣ ಪ್ರಸಾರಕ ಮಂಡಳದ ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಇಡಿ. ಕೋರ್ಸನ್ನು 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು ತಮ್ಮ ಕಾಲೇಜಿನಲ್ಲಿ ಬಿ.ಇಡಿ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 03 ಯುಕೆವಿ 2008, ಬೆಂಗಳೂರು, ದಿನಾಂಕ:7ನೇ ಫೆಬ್ರವರಿ 2008**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ/ಬಿ.ಪಿ.ಇಡಿ ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಳಗಾವಿ ಜಿಲ್ಲೆ ರಾಯಬಾಗದ ಶಿಕ್ಷಣ ಪ್ರಸಾರಕ ಮಂಡಳದ ಶಿಕ್ಷಣ ಮಹಾವಿದ್ಯಾಲಯದ ಬಿ.ಇಡಿ ಕೋರ್ಸಿಗೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲಿ,

ಪಿ.ಆರ್. 315

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ವಿಷಯ:** 2007–08ನೇ ಶೈಕ್ಷಣಿಕ ಸಾಲಿಗೆ ಉತ್ತರ ಕನ್ನಡ ಜಿಲ್ಲೆ ಭಟ್ಕಳದ ಅಂಜುಮನ್ ಹಮಿ–ಎ–ಮುಸ್ಲಿಮೀನ್‌ನ ಅಂಜುಮಾನ್ ಶಿಕ್ಷಣ ಮಹಾವಿದ್ಯಾಲಯದ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ

**ಉಲ್ಲೇಖ:** 1. ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ:ಇಡಿ 183 ಯುಕೆವಿ 2005, ದಿ:25–9–2007
2. ಎನ್.ಸಿ.ಟಿ.ಇ. ಪತ್ರ ಸಂಖ್ಯೆ:FRRO/NCTE/2007–08/15039, ದಿನಾಂಕ:20–11–2007
3. ಸಂಸ್ಥೆಯ ಕಾರ್ಯದರ್ಶಿಗಳ ಪತ್ರ ದಿನಾಂಕ:19–2–2008

**ಪೀಠಿಕೆ:**

ಸರ್ಕಾರಿ /ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಆಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲೆ ಭಟ್ಕಳದ ಅಂಜುಮಾನ್ ಹಮಿ–ಎ–ಮುಸ್ಲಿಮೀನ್ ಅಂಜುಮನ್ ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಇಡಿ. ಕೋರ್ಸನ್ನು 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಬಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು ತಮ್ಮ ಕಾಲೇಜಿನಲ್ಲಿ ಬಿ.ಇಡಿ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 02 ಯುಕೆವಿ 2008, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2008**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ/ಬಿ.ಪಿ.ಇಡಿ ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಉತ್ತರ ಕನ್ನಡ ಜಿಲ್ಲೆ ಭಟ್ಕಳದ ಅಂಜುಮಾನ್ ಹಮಿ–ಎ–ಮುಸ್ಲಿಮೀನ್‌ನ ಅಂಜುಮಾನ್ ಶಿಕ್ಷಣ ಮಹಾವಿದ್ಯಾಲಯದ ಬಿ.ಇಡಿ ಕೋರ್ಸಿಗೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 380

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ವಿಷಯ:** 2007–08ನೇ ಶೈಕ್ಷಣಿಕ ಸಾಲಿಗೆ ಹರಿಹರದ ಶ್ರೀ ಶೈಲ ಶಿಕ್ಷಣ ಮಹಾವಿದ್ಯಾಲಯದ ಎಂ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಕುರಿತು;

**ಉಲ್ಲೇಖ:** 1. ಎನ್.ಸಿ.ಟಿ.ಇ ಪತ್ರ ಸಂಖ್ಯೆ: F. SRO/NCTE/M.Ed/2006-07/18431. ದಿನಾಂಕ:28–2–2008.

2. ಸಂಸ್ಥೆಯ ಉಪಾಧ್ಯಕ್ಷರ ಪತ್ರ ದಿನಾಂಕ:1–3–2008

**ಪೀಠಿಕೆ:**

ಸರ್ಕಾರಿ /ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ/ಬಿ.ಪಿ.ಇಡಿ/ ಕೋರ್ಸ್‌ಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಆಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಎನ್.ಸಿ.ಟಿ.ಇ ಸದರಿ ಕಾಲೇಜಿನ ಎಂ.ಇಡಿ ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 25 (ಇಪ್ಪತ್ತೈದು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (2) ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಎಂ.ಇಡಿ. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 22 ಯುಎಸ್‌ವಿ 2008, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಎಂ.ಇಡಿ ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹರಿಹರದ ಶ್ರೀ ಜಗದ್ಗುರು ಪಂಚಾಚಾರ್ಯ ವಿಶ್ವಧರ್ಮ ವಿದ್ಯಾಪೀಠ (ರಿ)ನ ಶ್ರೀ ಶೈಲ ಶೀಕ್ಷಣ ಮಹಾವಿದ್ಯಾಲಯವನ್ನು ಎಂ.ಇಡಿ ಕೋರ್ಸಿನೊಂದಿಗೆ ಪ್ರಾರಂಭಿಸಲು 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 25 (ಇಪ್ಪತ್ತೈದು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 424

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಶಿಕ್ಷಣ ಸಚಿವಾಲಯ**

**ವಿಷಯ:** ಮಂಡ್ಯದ ಬಾಲಕರ ಸರ್ಕಾರಿ ಕಾಲೇಜಿನ ಹೆಸರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1. ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರ ಪತ್ರ ಸಂ:ಕಾಶಿಇ:ಶೈವಿ:ಸಹ ಶಿಕ್ಷಣ–7:2007–08, ದಿನಾಂಕ:23–5–2007

2. ಸರ್ಕಾರದ ಪತ್ರ ಸಂ:ಇಡಿ 96 ಯುಎಂವಿ 2007, ದಿ:4–6–2007

3. ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರ ಪತ್ರ ಸಂ:ಕಾಶಿಇ:ಶೈವಿ:ಹೆಸರು ಬದಲಾವಣೆ:47: 2007–08, ದಿನಾಂಕ:2–1–2008

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರ ಮೇಲ್ಕಂಡ ಓದಲಾದ (1)ರ ಪತ್ರದ ಹಿನ್ನಲೆಯಲ್ಲಿ, ಮಂಡ್ಯದ ಬಾಲಕರ ಸರ್ಕಾರಿ ಕಾಲೇಜಿನಲ್ಲಿ ದೊರೆಯುವ ಉನ್ನತ ಶಿಕ್ಷಣವು ಬಾಲಕಿಯರಿಗೂ ದೊರೆಯುವಂತೆ ಮಾಡುವ ಹಿತದೃಷ್ಟಿಯಿಂದ 2007–08ನೇ ಶೈಕ್ಷಣಿಕ ಸಾಲಿನಿಂದ ಈ ಕಾಲೇಜಿನಲ್ಲಿ ಸಹ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೊಳಿಸಲು ಓದಲಾದ (2)ರ ಸಕಾರದ ಪತ್ರದಲ್ಲಿ ಅನುಮತಿ ನೀಡಲಾಗಿದೆ ಅದರಂತೆ ಸಹ ಶಿಕ್ಷಣ ವ್ಯವಸ್ಥೆಯನ್ನು ಕಲ್ಪಸಲಾಗಿದ್ದು, 2007–08ನೇ ಶೈಕ್ಷಣಿಕ ಸಾಲಿನಿಂದಲೇ ಬಾಲಕ ಮತ್ತು ಬಾಲಕಿಯರಿಗೆ ಪ್ರವೇಶಾತಿ ನೀಡಲಾಗಿರುವುದರಿಂದ, ಮಂಡ್ಯದ ಬಾಲಕರ ಸರ್ಕಾರಿ ಕಾಲೇಜಿನ ಹೆಸರನ್ನು "ಸರ್ಕಾರಿ ಮಹಾವಿದ್ಯಾಲಯ" ಎಂದು ಬದಲಾಯಿಸಿ, ಆದೇಶ ನೀಡಬೇಕೆಂದು ಮೇಲೆ ಓದಲಾದ (3)ರ ಪತ್ರದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರು ಕೋರಿದ್ದಾರೆ.

ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರ ಪ್ರಸ್ತಾವನೆಯನ್ನು ಸಂವೀಕ್ಷಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 16 ಯುಎಂವಿ 2008, ಬೆಂಗಳೂರು, ದಿನಾಂಕ:11ನೇ ಮಾರ್ಚ್ 2008**

ಮೈಸೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಮತ್ತು ಶೈಕ್ಷಣಿಕ ಪರಿಷತ್ ಸಭೆಗಳಲ್ಲಿ ಮಂಡಿಸಿ, ಘಟನೋತ್ತರ ಅನುಮೋದನೆಯನ್ನು ಪಡೆಯುವ ಷರತ್ತಿಗೊಳಪಡಿಸಿ, 2007–08ನೇ ಶೈಕ್ಷಣಿಕ ಸಾಲಿನಿಂದಲೇ ಅನ್ವಯವಾಗುವಂತೆ ಮಂಡ್ಯದ ಬಾಲಕರ ಸರ್ಕಾರಿ ಕಾಲೇಜಿನ ಹೆಸರನ್ನು "ಸರ್ಕಾರಿ ಮಹಾವಿದ್ಯಾಲಯ" ಎಂದು ಬದಲಾವಣೆ ಮಾಡಲು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ ಪ್ರಕರಣ 59(5) ರಡಿಯಲ್ಲಿ ಅನುಮತಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 445

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** 2007–08ನೇ ಶೈಕ್ಷಣಿಕ ಸಾಲಿಗೆ ಬಿಜಾಪುರ ಜಿಲ್ಲೆ ತಾಳಿಕೋಟೆಯ ಶ್ರೀ ಘನಮಠೇಶ್ವರ ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಉಲ್ಲೇಖ:** 1. ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ:ಇಡಿ 152 ಯುಕೆವಿ 2007, ದಿ:16–8–2007.

2. ಎನ್.ಸಿ.ಟಿ.ಇ. ಪತ್ರ ಸಂಖ್ಯೆ: F. SRO/NCTE/B.ED/2006-07/18874, ದಿನಾಂಕ:19–3–2008.

3. ಸಂಸ್ಥೆಯ ಕಾರ್ಯದರ್ಶಿಗಳ ಪತ್ರ ದಿನಾಂಕ:4.4.2008.

**ಪ್ರಸ್ತಾವನೆ:**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬಿಜಾಪುರ ಜಿಲ್ಲೆ ತಾಳಿಕೋಟೆಯ ಶ್ರೀ ಘನಮಠೇಶ್ವರ ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಇಡಿ ಕೋರ್ಸನ್ನು 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ ಸದರಿ ಕಾಲೇಜಿನ ಬಿ.ಇಡಿ ಕೋರ್ಸಿಗೆ 2007–08ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು. ಉಲ್ಲೇಖ (3) ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿಗಳು ತಮ್ಮ

ಕಾಲೇಜಿನಲ್ಲಿ ಬಿ.ಇಡಿ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 38 ಯುಕೆವಿ 2008, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2008**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ/ಬಿ.ಪಿ.ಇಡಿ ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿಜಾಪುರ ಜಿಲ್ಲೆ ತಾಳಿಕೋಟೆಯ ಶ್ರೀ ಘನಮಠೇಶ್ವರ ಶಿಕ್ಷಣ ಮಹಾವಿದ್ಯಾಲಯದ ಬಿ.ಇಡಿ. ಕೋರ್ಸಿಗೆ 2007–08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 599

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದಡಿ 2007–08ನೇ ಸಾಲಿನ ವಿಶೇಷ ಯೋಜನೆಗಳಿಗಾಗಿ ಬೆಳಗಾಂ ಚಾಮರಾಜನಗರ ಕೊಡಗು, ಮೈಸೂರು ಹಾಗೂ ಉತ್ತರ ಕನ್ನಡ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆಗೆ ಬಾಕಿ ಇದ್ದ ಅನುದಾನವನ್ನು 2008–09ನೇ ಸಾಲಿನ ಆಯವ್ಯಯದಲ್ಲಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಯೋಜನಾ ಆಯೋಗ ಭಾರತ ಸರ್ಕಾರ, ನವದೆಹಲಿರವರ ಪತ್ರ ಸಂ.PC(P) 19/125/KAR/2007-WGS ದಿನಾಂಕ:5.3.2008

2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ.ಪಿಸಿ (ಪಿ) 19/312/ಎಸ್‌ಸಿಎ/2007–ಡಬ್ಲ್ಯೂಜಿಎಸ್ ದಿನಾಂಕ:7.3.2008

3. ಹಣಕಾಸು ಮಂತ್ರಾಲಯ, ಭಾರತ ಸರ್ಕಾರ ನವದೆಹಲಿ ಇವರ ಆದೇಶ ಸಂ.ಎಫ್.ನಂ 44 (6) ಪಿಎಫ್ 1/2006–343 ದಿನಾಂಕ:31–3–2008

4. ಆರ್ಥಿಕ ಇಲಾಖೆಯ ಜಮಾ ಧೃಡೀಕರಣ ಪತ್ರ ಸಂ.ಆಇ 364 ಎಫ್‌ಆರ್‌ಸಿ 2008 ದಿನಾಂಕ:8.4.2008

**ಪ್ರಸ್ತಾವನೆ:**

ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ ಪತ್ರದಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದಡಿ 2006–07ನೇ ಸಾಲಿನ ಅಂತ್ಯಕ್ಕೆ ಖರ್ಚಾಗದೇ ಉಳಿದ ಅನುದಾನದ ಪೈಕಿ, 2007–08ನೇ ಸಾಲಿನಲ್ಲಿ ರಾಜ್ಯದ ಬೆಳಗಾಂ, ಚಾಮರಾಜನಗರ, ಕೊಡಗು, ಮೈಸೂರು, ಹಾಗೂ ಉತ್ತರ ಕನ್ನಡ ಜಿಲ್ಲೆಗಳ ಒಟ್ಟು ರೂ. 135.550 ಲಕ್ಷ ಮೊತ್ತದ ವಿಶೇಷ ಯೋಜನೆಗಳ ಅನುಷ್ಠಾನಕ್ಕಾಗಿ ಮಂಜೂರಾತಿ ನೀಡಿ, ಅನುದಾನವನ್ನು ಬಳಸಲು ಅನುಮೋದನೆ ನೀಡಿದೆ. 2006–07ನೇ ಸಾಲಿನ ಅಂತ್ಯಕ್ಕೆ ಖರ್ಚಾಗದೇ ಉಳಿದ ಭಾಗಶಃ ಅನುದಾನವನ್ನು ಹಾಲಿ ಹೊಂದಾಣಿಕೆ ಮಾಡಿಕೊಳ್ಳುವ ಮೂಲಕ ಹಾಗೂ ಭಾಗಶಃ ಅನುದಾನವನ್ನು 2007–08ನೇ ಸಾಲಿನ ಮೂರನೇ ಕಂತಿನ ಅನುದಾನ ಬಿಡುಗಡೆ ಸಮಯದಲ್ಲಿ ವಸೂಲಾತಿ ಮಾಡಿಕೊಳ್ಳುವ ಮೂಲಕ ಸದರಿ ವಿಶೇಷ ಯೋಜನೆಗಳ ಅನುಷ್ಠಾನಕ್ಕಾಗಿ ಸಂಬಂಧ ಪಟ್ಟ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಈ ಅನುದಾನವನ್ನು ಬಿಡುಗಡೆ ಮಾಡಬೇಕಿತ್ತು. ಆದರೆ, ಕೇಂದ್ರ ಹಣಕಾಸು ಮಂತ್ರಾಲಯವು ಮೇಲೆ ಓದಲಾದ ಪತ್ರ (3) ರಂತೆ ಬಿಡುಗಡೆ ಮಾಡಿರುವ ಅನುದಾನವು ರಾಜ್ಯ ಸರ್ಕಾರದ ಖಾತೆಗೆ ಜಮೆ ಆಗಿರುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ ಪತ್ರ (4) ರಂತೆ ದಿನಾಂಕ:8–4–2008 ರಂದು ಜಮಾ ಧೃಢೀಕರಣ ಪತ್ರವನ್ನು ನೀಡಿರುತ್ತದೆ. ಈ ಹಿನ್ನಲೆಯಲ್ಲಿ ಸದರಿ ಅನುದಾನವನ್ನು 2007–08ನೇ ಸಾಲಿನಲ್ಲಿ ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ.

ಮುಂದುವರೆದು, 2008–09ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮಕ್ಕೆ ಒದಗಿಸಿರುವ ಒಟ್ಟು ಅನುದಾನ ರೂ. 2332.64 ಲಕ್ಷ ಪೈಕಿ, 2007–08ನೇ ಸಾಲಿನ ವಿಶೇಷ ಯೋಜನೆಗಳಿಗಾಗಿ ಅನುದಾನವನ್ನು ರಾಜ್ಯದ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಆದೇಶ

**ಸರ್ಕಾರದ ಆದೇಶ ಸಂ.ಗ್ರಾಅಪ. 17. ಪಘಯೋ, 2007 ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕೇಂದ್ರ ಸರ್ಕಾರದ ಯೋಜನಾ ಆಯೋಗವು ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದಡಿ 2007–08ನೇ ಸಾಲಿನಲ್ಲಿ ಮಂಜೂರಾತಿ ನೀಡಿರುವ ರಾಜ್ಯದ ಐದು ವಿಶೇಷ ಯೋಜನೆಗಳನ್ನು ಅನುಷ್ಠಾನಗೊಳಿಸಲು ಬಿಡುಗಡೆ ಮಆಡಬೇಕಾಗಿದ್ದ ಅನುದಾನ ಅಂದರೆ ಅನುಬಂಧದಲ್ಲಿ ತೋರಿಸಿರುವಂತೆ ಒಟ್ಟು ರೂ. 130.643 ಲಕ್ಷ (ಒಂದು ಕೋಟಿ ಮೂವತ್ತು ಲಕ್ಷ ಅರವತ್ತ ನಾಲ್ಕು ಸಾವಿರದ ಮೂರು ನೂರು ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿದೆ.

ಸದರಿ ವಿಶೇಷ ಯೋಜನೆಗಳನ್ನು ಈ ಕೆಳಕಂಡ ನಿಬಂಧನೆಗಳ ಅಡಿಯಲ್ಲಿ ಅನುಷ್ಠಾನಗೊಳಿಸುವುದು.

1. 2007–08ನೇ ಸಾಲಿನಲ್ಲಿ ಮಂಜೂರಾಗಿರುವ ಮೇಲ್ಕಂಡ ವಿಶೇಷ ಕ್ರಿಯಾಯೋಜನೆಗಳಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗಧಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.

2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗ ಸೂಚಿಗಳನ್ವಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

3. ಒಂದು ವಲಯದ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು.

4. ಈ ವಿಶೇಷ ಯೋಜನೆಗಳ ಪ್ರಗತಿ ಬಗ್ಗೆ ಮಾಸಿಕ ವರದಿ, ಹಣ ಬಳಕೆ ಪ್ರಮಾಣ ಪತ್ರ ಹಾಗೂ ಆಡಿಟ್ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

5. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ:14.7.2005ರ ಸೂಚನೆಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆಯುವುದು.

"2551–ಗುಡ್ಡಗಾಡು ಪ್ರದೇಶಗಳು–01–ಪಶ್ಚಿಮ ಘಟ್ಟ ಗಳು–198 ಗ್ರಾಮ ಪಂಚಾಯಿತಿಗಳಿಗೆ ಸಹಾಯ–6–ಗ್ರಾಮ ಪಂಚಾಯತ್–02–ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ (ಯೋಜನೆ)"

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ. 190. ಪಿಬಿಎಸ್. 2008ರ ದಿನಾಂಕ;19–4–2008 ರಂತೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ.ಶಿರೋಳ್**

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ ಹಾಗೂ ಪದ
ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶ ಸಂ.ಗ್ರಾಅಪ. 17 ಪಘಯೋ, 2007 ಬೆಂಗಳೂರು, ದಿನಾಂಕ:22ನೇ ಏಪ್ರಿಲ್ 2008ಕ್ಕೆ ಅನುಬಂಧ**

(ರೂ ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲಾ ಪಂಚಾಯತ್ | ಯೋಜನೆ | ಒಟ್ಟು ಮಂಜೂರಾದ ಅನುದಾನ | ಕಾಲಂ 4 ರ ಪೈಕಿ | |
|---|---|---|---|---|---|
| | | | | ಹೊಂದಾಣಿಕೆ ಮಾಡಿ ಕೊಂಡಿರುವ (2006–07ನೇ ಸಾಲಿನ ಅಂತ್ಯಕ್ಕೆ ಖರ್ಚಾಗದೇ ಉಳಿದ) ಅನುದಾನ | ಹಾಲಿ ಬಿಡುಗಡೆ ಮಾಡುತ್ತಿರುವ ಉಳಿಕೆ ಅನುದಾನ |
| 1 | ಬೆಳಗಾಂ | ಬೈಲಹೊಂಗಲ ತಾಲ್ಲೂಕಿನ ಹಿರೇಹಳ್ಳ ಜಲಾನಯನದ ವಿಶೇಷ ಕಿರಿ ಜಲಾನಯನ ಯೋಜನೆ | 8.874 | 0.000 | 8.874 |

| | | | | | |
|---|---|---|---|---|---|
| 2 | ಚಾಮರಾಜನಗರ | ಗುಂಡ್ಲುಪೇಟೆ ತಾಲ್ಲೂಕಿನ ದೇಶಿಪುರ ಹಳ್ಳ ಜಲಾನಯನದ ವಿಶೇಷ ಯೋಜನೆ | 39.000 | 0.000 | 39.000 |
| 3 | ಕೊಡಗು | ಮಡಿಕೇರಿ ತಾಲ್ಲೂಕಿನ ಕಾವೇರಿ ಜಲಾನಯನದ ವಿಶೇಷ ಕಿರು ಜಲಾನಯನ ಯೋಜನೆ | 30.000 | 0.000 | 30.000 |
| 4 | ಮೈಸೂರು | ಹೆಚ್.ಡಿ.ಕೋಟೆ ತಾಲ್ಲೂಕಿನ ಬೀರಂಬಹಳ್ಳಿ–ಹೊಸಹಳ್ಳಿ ಜಲಾನಯನದ ವಿಶೇಷ ಕಿರು ಜಲಾನಯನ ಯೋಜನೆ | 25.000 | 4.907 | 20.093 |
| 5 | ಉತ್ತರ ಕನ್ನಡ | ಭಟ್ಕಳ ತಾಲ್ಲೂಕಿನ ಕೊಪ್ಪ ಗ್ರಾಮ ಪಂಚಾಯಿತಿಯ ಹೆಚ್ಚುವರಿ ಕ್ರಿಯಾ ಯೋಜನೆ | 32.676 | 0.000 | 32.676 |
| | | ಒಟ್ಟು | 135.550 | 4.907 | 130.643 |

(ಮೊಬಲಗು ಒಂದು ಕೋಟಿ ಮೂವತ್ತು ಲಕ್ಷ ಅರವತ್ತ ನಾಲ್ಕು ಸಾವಿರದ ಮೂರು ನೂರು ರೂಪಾಯಿಗಳು ಮಾತ್ರ)

**ಸಿ.ಎಂ.ಶಿರೋಳ್**

ಪಿ.ಆರ್. 681

ನಿರ್ದೇಶಕರು

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ ಹಾಗೂ

ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀಮತಿ ಎನ್.ಬಿ. ಅಲುಮೇಲು, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮದ್ದೂರು ಅವರು ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಕಾರಣ ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಲಾ 56 ಪಿಪಿಇ 99, ದಿನಾಂಕ:12.01.2000.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ.1/98/2005–06, ದಿನಾಂಕ:18.12.2006

**ಪ್ರಸ್ತಾವನೆ:**

ಶ್ರೀಮತಿ ಎನ್.ಬಿ. ಅಲುಮೇಲು, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮದ್ದೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:12.1.2000ರ (ಕ್ರ.ಸಂ. 61) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ:19–1–2000ರ ಪೂವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ದಿನಾಂಕ:18.1.2002ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ಮುಕ್ತಾಯಗೊಂಡಿರುತ್ತದೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗಧಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೇ ಇರುವುದರಿಂದ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲು ಸಾಧ್ಯವಿರುವುದಿಲ್ಲ. ಆದುದರಿಂದ ದಿನಾಂಕ:18.1.2002 ರಿಂದ ದಿನಾಂಕ:31.5.2008 ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(I)(i)ರ ರೀತ್ಯಾ ವಿಸ್ತರಣೆ ಮಾಡಬಹುದಾಗಿದೆ ಎಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 12 ಪಿಪಿಇ 2007, ಬೆಂಗಳೂರು, ದಿನಾಂಕ:17ನೇ ಜೂನ್ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1) (i) ರನ್ವಯ ಶ್ರೀಮತಿ ಎನ್.ಬಿ. ಅಲುಮೇಲು, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮದ್ದೂರು ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 18.1.2002 ರಇಂದ ದಿನಾಂಕ:31.5.2008 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 947

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ
ಮತ್ತು ಅಭಿಯೋಗಗಳು)

**ವಿಷಯ:** ಶ್ರೀಮತಿ ಬಿ. ಅರಣಾಕ್ಷಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ 3ನೇ ನ್ಯಾಯಾಲಯ, ಬಿಜಾಪುರ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಲಾ 193 ಪಿಪಿಇ 2003, ದಿನಾಂಕ:6.5.2004.

2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ.1/40/2007–08, ದಿನಾಂಕ:29.11.2007.

**ಪ್ರಸ್ತಾವನೆ:**

ಶ್ರೀಮತಿ ಬಿ. ಅರುಣಾಕ್ಷಿ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆ.ಎಂ.ಎಫ್.ಸಿ ನ್ಯಾಯಾಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:6.5.2004ರ (ಕ್ರ.ಸಂ.26) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ:17.5.2004ರ ಪೂವಾಹ್ನದಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ದಿನಾಂಕ:16.5.2006ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ಮುಕ್ತಾಯಗೊಂಡಿರುತ್ತದೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗಧಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೇ ಇರುವುದರಿಂದ, ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲು ಸಾಧ್ಯವಿರುವುದಿಲ್ಲ ಆದುದರಿಂದ ದಿನಾಂಕ:17.5.2006 ರಿಂದ ದಿನಾಂಕ:2.8.2007 ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(I)(i)ರ ರೀತ್ಯಾ ವಿಸ್ತರಣೆ ಮಾಡಬಹುದಾಗಿದೆ ಎಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 572 ಪಿಪಿಇ 2007, ಬೆಂಗಳೂರು, ದಿನಾಂಕ:17ನೇ ಜೂನ್ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪನಿಯಮ 1 (i) ರನ್ವಯ ಶ್ರೀಮತಿ ಬಿ. ಅರುಣಾಕ್ಷಿ ಸಹಾಯಕ ಸರ್ಕಾರಿ ಅಭಿಯೋಜಕರು, ಎನೇ ಜೆ.ಎಂ.ಎಫ್.ಸಿ ನ್ಯಾಯಾಲಯ, ವಿಜಾಪುರ ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ:17.5.2006 ರಿಂದ ದಿನಾಂಕ: 2.8.2007 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 949

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ
ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪ ನಿರ್ದೇಶಕರು, ಭೂದಾಖಲೆಗಳ ವಿಭಾಗ, ಧಾರವಾಡ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಅಪರ ಆರಕ್ಷಕ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರುರವರ ಪತ್ರ ಸಂಖ್ಯೆ. ಲೋಕ್/ಐ.ಎನ್.ವಿ.(ಜಿ) ಎಲ್. 36/ಸಿ.ಆರ್. 3/2007, ಧಾರವಾಡ, ದಿನಾಂಕ: 3–5–2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 03–05–2008ರ ಪತ್ರದಲ್ಲಿ ಅಪರ ಅರಕ್ಷಕ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪ ನಿರ್ದೇಶಕರು, ಭೂದಾಖಲೆಗಳ ವಿಭಾಗ, ಧಾರವಾಡ ರವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದು ಬಂದ ವಿಶ್ವಾಸಾರ್ಹ ಮಾಹಿತಿ ಅನ್ವಯ ಅವರ ವಿರುದ್ಧ ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಗದಗ ರವರು ದಿನಾಂಕ: 24–08–2007 ರಂದು ಲಂಚ ನಿರೋಧಕ ಕಾಯ್ದೆ 1988ರ ಕಲಂ 13 (1) (ಇ) ಸಹ ಕಲಂ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ. 3/2007ರಲ್ಲಿ ಪ್ರಕರಣ ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಆಪಾದಿತರಾದ ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪ ನಿರ್ದೇಶಕರು, ಭೂದಾಖಲೆಗಳ ವಿಭಾಗ, ಧಾರವಾಡ ರವರು ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 13 (1) (ಇ) ಜೊತೆ 13 (2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಗೋಚರವಾಗಿದ್ದು, ಆರೋಪಿತರು ಅಕ್ರಮ ಆಸ್ತಿಯನ್ನು ಸಂಪಾದಿಸುವುದು ಹಾಗೂ ಆಪರಾದಿಕ ದುರ್ನಡತೆ ಎಸಗಿರುವುದು ಕಂಡು ಬಂದಿರುತ್ತದೆ.

ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪ ನಿರ್ದೇಶಕರು, ಭೂದಾಖಲೆಗಳ ವಿಭಾಗ, ಧಾರವಾಡ ರವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಈ ಕೂಡಲೇ ಅಮಾನತ್ತಿನಲ್ಲಿಡಲು ಹಾಗೂ ಅವರ ಲೀನ್ (ಸ್ಥಾನ)ವನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 23 ಭೂದಾಸೇ (1) 2008, ಬೆಂಗಳೂರು ದಿನಾಂಕ: 31ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 (1) (3)ರ ಮೇರೆಗೆ ಸರ್ಕಾರವು ಶ್ರೀ ಹೆಚ್.ಎಸ್. ನಾಗರಾಳ, ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪ ನಿರ್ದೇಶಕರು, ಭೂದಾಖಲೆಗಳ ವಿಭಾಗ, ಧಾರವಾಡರವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಆಮಾನತ್ತಿನ ಅವಧಿಯಲ್ಲಿ ಶ್ರೀ ಹೆಚ್.ಎಸ್. ನಾಗರಾಳ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ರ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಶ್ರೀ ಹೆಚ್.ಎಸ್. ನಾಗರಾಳರವರ ಲೀನ್‌ನ್ನು ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ ಜಿಲ್ಲೆಗೆ, ಖಾಲಿ ಇರುವ ಹುದ್ದೆಗೆ ವರ್ಗಾಯಿಸಲಾಗಿದೆ. ಅಮಾನತ್ತಿನ ಅವಧಿಯಲ್ಲಿ ಈ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 896

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಪುತ್ತೂರು ತಾಲ್ಲೂಕು ಬೆಳಿನೆಲೆ ಗ್ರಾಮದ ಸರ್ವೆ ನಂ. 12/1ಎ2, 12/1ಬಿ, 19/3ಎ ಮಾಫಿ ಪಾಸು ಪ್ರಕರಣದಲ್ಲಿ ಗಡಿಗಳನ್ನು ಗುರುತಿಸುವಾಗ ಪಕ್ಕದ ಸರ್ಕಾರಿ ಜಾಗವನ್ನು ಸೇರಿಸಿ ಗಡಿ ಗುರುತುಗಳನ್ನು ನಿಗದಿಪಡಿಸಿ, ಸರ್ಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಭೂದಾಖಲೆಗಳ ಉಪ ನಿರ್ದೇಶಕರು, ಮಂಗಳೂರು ಹಾಗೂ ಇತರೆ ಭೂಮಾಪನ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1 ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 7 ಭೂದಾಸೇ (1) 2001, ದಿ: 1–6–2001.

2 ಶ್ರೀ ಆರ್. ಸುರೇಶ್ ರಾವ್, ಪ್ರಥಮ ದರ್ಜೆ ಭೂಮಾಪಕರು ರವರ ದಿ: 16–02–2002ರ ರಕ್ಷಣಾ ಹೇಳಿಕೆ.

3 ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರು ರವರ ದಿ: 18–4–2002ರ ರಕ್ಷಣಾ ಹೇಳಿಕೆ.

4 ಶ್ರೀ ಪಿ. ಪ್ರಸನ್ನಕುಮಾರ್, DDLR ರವರ ದಿ: 13–7–2001ರ ರಕ್ಷಣಾ ಹೇಳಿಕೆ.

5 ಸರ್ಕಾರದ ಆದೇಶ ಸಂಖ್ಯೆ: ಕಂಇ 7 ಭೂದಾಸೇ (1) 2001, ದಿ: 21–8–2002.

6 ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿ: 6–4–2004.

7. 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ.ಕಂಇ 7 ಭೂದಾಸೇ (1) 2001, ದಿ: 26–5–2004.

8 ಶ್ರೀ ವಿ. ಪ್ರಸನ್ನಕುಮಾರ್, DDLR ರವರ 2ನೇ ಕಾರಣ ಕೇಳಿ ನೋಟೀಸ್‌ಗೆ ದಿ: 1–1–2005ರ ಲಿಖಿತ ಉತ್ತರ.

9 ಶ್ರೀ ಆರ್. ಸುರೇಶ್‌ರಾವ್ ರವರು 2ನೇ ಕಾರಣ ಕೇಳಿ ನೋಟೀಸ್‌ಗೆ ದಿ: 23–7–2004 ಲಿಖಿತ ಉತ್ತರ.

10 ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರುರವರ 2ನೇ ಕಾರಣ ಕೇಳಿ ನೋಟೀಸ್‌ಗೆ ದಿ: 16–7–2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ವಿ. ಪ್ರಸನ್ನಕುಮಾರ್‌ರವರು ಭೂದಾಖಲೆಗಳ ಉಪ ನಿರ್ದೇಶಕರು, ಮಂಗಳೂರು ಶ್ರೀ ಆರ್. ಸುರೇಶ್‌ರಾವ್, ಪ್ರ.ದ.ಭೂ. ಉಪನಿರ್ದೇಶಕರು ಭೂದಾಖಲೆಗಳ ಇಲಾಖೆರವರ ಕಛೇರಿ ಮಂಗಳೂರು, ಶ್ರೀ ಮಲ್ಲೇಶಪ್ಪ, ದ್ವಿ.ದ.ಭೂ. ಸಹಾಯಕ ನಿರ್ದೇಶಕರ ಕಛೇರಿಯ ಪುತ್ತೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಪುತ್ತೂರು ತಾಲ್ಲೂಕು ಬಿಳಿನೆಲೆ ಗ್ರಾಮದ ಸ.ನಂ. 12:1ಎ2, 12:1ಬಿ, 19:3ಎ ಬಾಬ್ತು ಭೂದಾಖಲೆಗಳ ಸಹಾಯಕ ನಿರ್ದೇಶಕರು ಪುತ್ತೂರು ಕಛೇರಿಯ ಕಡತ ನಂ. ಎಫ್.ಓ.ಆರ್. 81/95–96ಕ್ಕೆ ಸಂಬಂಧಿಸಿದಂತೆ ಜಂಟಿ ನಕ್ಷೆ ತಯಾರಿಸುವಾಗ ವಾಸ್ತವವಾಗಿ ಇರಬೇಕಾದ ಗಡಿಗಳನ್ನು ಸ್ಥಳದಲ್ಲಿ ಬದಲಾಯಿಸಿ ಪಟ್ಟಾ ಸ್ಥಳದ ಸರ್ವೆ ನಂಬರ್‌ಗಳಾದ 12:1ಎ2 ಮತ್ತು 12:1ಬಿ ಹಾಗೂ 19:3ಎ ಗಳಿಗೆ ಹೊಂದಿಕೊಂಡಂತೆ ಇರುವ ಸರ್ಕಾರಿ ಸ್ಥಳವಾದ 12:1ಎ1ಎ, 19:3ಬಿ ಮತ್ತು ಸಂರಕ್ಷಿತ ಅರಣ್ಯದಿಂದ ಕೂಡಿರುವ ಸರ್ವೆ ನಂಬರ್ 175ರಲ್ಲಿ ಇರುವ 76 ಮರಗಳನ್ನು ಮೇಲಿನ ಪಟ್ಟಾ ಸ್ಥಳದೊಳಗಡೆ ಬರುತ್ತವೆಂದು ಜಂಟಿ ನಕ್ಷೆ ಮತ್ತು ಕಡಿಯಲಿರುವ ಮರಗಳ ಪಟ್ಟಿಯಲ್ಲಿ ಸೇರಿಸಿ ಆ ಸರ್ಕಾರಿ ಜಾಗದಲ್ಲಿನ 76 ಮರಗಳು ಕಡಿತಗೊಳ್ಳಲು ಕಾರಣರಾಗಿ ಸರ್ಕಾರಕ್ಕೆ ಈ ದುರ್ನಡತೆಯಿಂದ ರೂ. 4,25,869–00 ರೂಪಾಯಿಗಳ ಆರ್ಥಿಕ ನಷ್ಟ ಉಂಟಾಗಲು ಅವಕಾಶ ಮಾಡಿಕೊಟ್ಟು ಪರಿಸರ ನಾಶಕ್ಕೂ ಜವಾಬ್ದಾರರಾಗಿರುತ್ತಾರೆ. ಇದರಿಂದಾಗಿ ಕರ್ನಾಟಕ ಸರ್ಕಾರಿ (ನಡತೆ) ನಿಯಮಾವಳಿ 1966ರ ನಿಯಮ 3 (i) ಮತ್ತು (iii)ನ್ನು ಉಲ್ಲಂಘಿಸಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ವಿಚಾರಣೆಯನ್ನು ನಡೆಸಲು ತೀರ್ಮಾನ ಕೈಗೊಂಡು ಮೇಲೆ (1)ರಲ್ಲಿ ಓದಲಾದ ದಿ: 1–6–2001 ಕಾರಣ ಕೇಳುವ ನೋಟೀಸು ಹಾಗೂ ಆರೋಪಣಾ ಪಟ್ಟಿಯನ್ನು ಹೊರಡಿಸಲಾಯಿತು. ಈ ಬಗ್ಗೆ ಮೇಲೆ ಓದಲಾದ (2) (3) ಮತ್ತು (4)ರಲ್ಲಿ ಕ್ರಮವಾಗಿ ದಿನಾಂಕ: 16–02–2002, 18–4–2002 ಮತ್ತು 13–7–2001ರ ಲಿಖಿತ ಹೇಳಿಕೆಗಳಲ್ಲಿ ಶ್ರೀ ಆರ್. ಸುರೇಶ್ ರಾವ್, ಪ್ರಥಮ ದರ್ಜೆ ಭೂಮಾಪಕರು, ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರು ಮತ್ತು ಶ್ರೀ ಪಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪನಿರ್ದೇಶಕರು ರವರುಗಳು ತಮ್ಮ ಮೇಲಿನ ಆರೋಪಗಳನ್ನು ಅಲ್ಲಗೆಳೆದು ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ಈ ಬಗ್ಗೆ ಆರೋಪಿತ ಅಧಿಕಾರಿ ನೌಕರರುಗಳು ಎಸಗಿರುವ ಗಂಭೀರ ದುರ್ನಡತೆ ಕರ್ತವ್ಯ ನಿರ್ಲಕ್ಷತೆ ತೋರಿರುವ ಆರೋಪಗಳು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದಿರುವುದರಿಂದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಮೇಲೆ (5)ರಲ್ಲಿ ಓದಲಾದ ದಿನಾಂಕ: 21–8–2002ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಜೆ. ಇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (6)ರಲ್ಲಿ ಓದಲಾದ ದಿ: 6–4–2004ರ ವಿಚಾರಣಾ ವರದಿಯನ್ನು ಸಲ್ಲಿಸಿ "ಪುತ್ತೂರು ತಾಲ್ಲೂಕಿನ ಬಿಳಿನೆಲೆ ಗ್ರಾಮದ ಸರ್ವೆ ನಂಬರ್ 12:1ಎ2, 12:1ಬಿ, 19:3ಎ ಜಮೀನುಗಳಿಗೆ ಸಂಬಂಧಿಸಿದಂತೆ ಮಾಫಿಪಾಸು ನೀಡುವ ಪ್ರಕರಣದಲ್ಲಿ ಅದರ ಗಡಿಗಳನ್ನು ಗುರ್ತಿಸುವಾಗ ಪಟ್ಟಾ ಜಮೀನಿನ ಗಡಿ ಅಳತೆ ಜೊತೆಗೆ ಸರ್ಕಾರಿ ಜಮೀನನ್ನೂ ಸೇರಿಸಿ, ಸರ್ವೆ ಮಾಡಿ, 76 ಮರಗಳು ಪಟ್ಟಾ ಜಮೀನಿನಲ್ಲಿ ಬರುತ್ತದೆ ಎಂಬುದಾಗಿ ತೋರಿಸಿ, ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಲು 1, 2 ಮತ್ತು 3ನೇ ಆರೋಪಿತ ಅಧಿಕಾರಿ/ನೌಕರರು ಕಾರಣಕರ್ತರು ಎಂಬುದರ ಬಗ್ಗೆ ಸಂದೇಹವಿಲ್ಲ. ಆರೋಪಿತ ಅಧಿಕಾರಿಗಳು

ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಗಳಾಗಿದ್ದು, ಗುರುತರ ಕಾರ್ಯವನ್ನು ನಿರ್ವಹಿಸುವಲ್ಲಿ ನಿರ್ಲಕ್ಷ್ಯ ಮನೋಭಾವವನ್ನು ತೋರಿಸಿ ಸರ್ಕಾರದ ಜಾಗದಲ್ಲಿರುವ ಅರಣ್ಯ ಸಂಪತ್ತಿನ ನಷ್ಟಕ್ಕೆ ಕಾರಣರಾಗಿ, ಕರ್ತವ್ಯ ಲೋಪವನ್ನು ಎಸಗಿದ್ದಾರೆ. ಹಾಗೂ ಸರ್ಕಾರಿ ನೌಕರರಾಗಿರಲು ಅರ್ಹರಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ಸಾಬೀತುಪಡಿಸಲ್ಪಟ್ಟಿದೆ" ಎಂದು ತಿಳಿಸುತ್ತಾ 3 ಜನ ಆರೋಪಿ ಅಧಿಕಾರಿಗಳ ವಿರುದ್ಧ ಮಾಡಿರುವ ಆರೋಪಣೆಗಳು ಸಾಬೀತಾಗಿರುತ್ತದೆಂದು ತಮ್ಮ ವರದಿಯಲ್ಲಿ ತೀರ್ಮಾನ ನೀಡಿದ್ದಾರೆ. ಈ ಬಗ್ಗೆ ಮೇಲೆ (7)ರಲ್ಲಿ ಓದಲಾದ ದಿ: 26–5–2004ರ 2ನೇ ಕಾರಣ ಕೇಳುವ ನೋಟೀಸನ್ನು ಆರೋಪಿತರುಗಳಿಗೆ ಜಾರಿ ಮಾಡಿ ಅದರೊಡನೆ ವಿಚಾರಣಾ ವರದಿಯ ಪ್ರತಿ ಒದಗಿಸಲಾಗಿತ್ತು.

ಈ ಬಗ್ಗೆ ಲಿಖಿತ ಹೇಳಿಕೆ ನೀಡಿದ ಆರೋಪಿತರುಗಳಾದ ಶ್ರೀ ವಿ. ಪ್ರಸನ್ನ ಕಮಾರ್‌ರವರು ಮೇಲೆ (8)ರಲ್ಲಿ ಓದಲಾದ ದಿ: 1–1–2005ರ ತಮ್ಮ 2ನೇ ಕಾರಣ ಕೇಳಿ ನೋಟೀಸ್‌ಗೆ ಉತ್ತರಿಸುತ್ತಾ ಪ್ರಸ್ತುತ ಪ್ರಕರಣದಲ್ಲಿ ತಮ್ಮಿಂದ ಯಾವುದೇ ತಪ್ಪು ನಡೆದಿಲ್ಲ ಎಂದು ತಿಳಿಸುತ್ತಾ ಆರೋಪ ಮುಕ್ತರನ್ನಾಗಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಕ್ರಮಬದ್ಧಗೊಳಿಸಲು ಕೋರಿದ್ದಾರೆ.

ಶ್ರೀ ಆರ್. ಸುರೇಶ್‌ರಾವ್, ಪ್ರಥಮ ದರ್ಜೆ ಭೂಮಾಪಕರು ಮೇಲೆ (9)ರಲ್ಲಿ ಓದಲಾದ ದಿ: 23–7–2004ರ 2ನೇ ಕಾರಣ ಕೇಳಿ ನೋಟೀಸ್‌ಗೆ ಲಿಖಿತ ಉತ್ತರ ಮತ್ತು ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರು ಮೇಲೆ (10)ರಲ್ಲಿ ಓದಲಾದ ದಿ: 6–7–2004 ಲಿಖಿತ ಉತ್ತರ ನೀಡಿ ಈ ಹಿಂದೆ ನೀಡಿದ್ದ ಹೇಳಿಕೆಗಳನ್ನು ಪರಿಗಣಿಸಬೇಕೆಂದು ತಮ್ಮಿಂದ ಯಾವುದೇ ತಪ್ಪಾಗಿಲ್ಲ ಮೇಲಾಧಿಕಾರಿಗಳ ನಿರ್ದೇಶನದಂತೆ ಕಾರ್ಯ ಮಾಡಿದ್ದೇವೆ. ಆದುದರಿಂದ ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ.

ಪ್ರಸ್ತುತ ಪ್ರಕರಣದಲ್ಲಿ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ತಿಳಿದು ಬರುತ್ತದೆ.

ಅ) ವಿಚಾರಣಾ ವರದಿಯಲ್ಲಿ 3 ಜನ ಆರೋಪಿತರ ವಿರುದ್ಧ ಮಾಡಿರುವ ಆರೋಪಗಳು ಸಾಬೀತಾಗಿರುತ್ತದೆ.

ಆ) ಖಾಸಗಿ ಹಿಡುವಳಿದಾರರೊಂದಿಗೆ ಒಳಸಂಚು ನಡೆಸಿ ದುರುದ್ದೇಶದಿಂದ ಸರ್ಕಾರಿ ಜಾಗ ಮತ್ತು ರಕ್ಷಿತ ಅರಣ್ಯದಲ್ಲಿ ಬರುವ 76 ಮರಗಳನ್ನು ಅಕ್ರಮವಾಗಿ ಕಡಿಯಲು ಅವಕಾಶ ಮಾಡಿಕೊಟ್ಟು ಈ ಅಕ್ರಮದಿಂದ ಸರ್ಕಾರಕ್ಕೆ ಅಂದಿನ ಬೆಲೆ ರೂ. 4,25,869–00 ನಷ್ಟ ಉಂಟಾಗಿರುತ್ತದೆ.

ಇ) ಆರೋಪಿತರು ಪರಿಸರ ನಾಶ ಮತ್ತು ಅಮೂಲ್ಯವಾದ ಪ್ರಕೃತಿ ಮತ್ತು ಅರಣ್ಯ ನಾಶಕ್ಕೂ ಜವಾಬ್ದಾರರಾಗಿರುತ್ತಾರೆ.

ಈ) ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ನಾಟಕ ನಾಗರಿಕ (ನಡತೆ) ನಿಯಮಾವಳಿ 1966ರ ನಿಯಮ 3 (i) ಮತ್ತು (iii)ನ್ನು ಉಲ್ಲಂಘಿಸಿರುತ್ತಾರೆ.

ಮೇಲ್ಕಂಡ ವಿವರಗಳನ್ನು ಪರಿಶೀಲಿಸಿದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರು ದಿನಾಂಕ: 21–12–2007ರಂದು ಮೃತರಾಗಿರುವುದರಿಂದ ಅವರ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು ಹಾಗೂ ಉಳಿದವರ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 7 ಭೂದಾಸೇ (1) 2001, ಬೆಂಗಳೂರು ದಿನಾಂಕ: 29ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv) ರನ್ವಯ ಶ್ರೀ ವಿ ಪ್ರಸನ್ನಕುಮಾರ್, ಭೂದಾಖಲೆಗಳ ಉಪನಿರ್ದೇಶಕರು ಮತ್ತು ಶ್ರೀ ಆರ್. ಸುರೇಶ್‌ರಾವ್, ಪ್ರಥಮ ದರ್ಜೆ ಭೂಮಾಪಕರು ರವರುಗಳಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ. 4,25,869–00ಗಳ ಪೈಕಿ ಅದರ 1/3 ಭಾಗ ಅಂದರೆ ತಲಾ ರೂ. 1,41,956–00 (ಒಂದು ಲಕ್ಷದ ನಲವತ್ತೊಂದು ಸಾವಿರದ ಒಂಭೈನೂರ ಐವತ್ತಾರು ರೂಪಾಯಿಗಳು ಮಾತ್ರ)ಗಳನ್ನು ಮಾರ್ಚಿ 1996ರಿಂದ ಹಣವನ್ನು ಪೂರ್ಣವಾಗಿ ಪಾವತಿಸುವವರೆಗೆ ಶೇಕಡ 8% ದರದಲ್ಲಿ ಬಡ್ಡಿ ಸೇರಿಸಿ ವಸೂಲು ಮಾಡುವುದು ಹಾಗೂ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv–ಎ) ರನ್ವಯ ಶ್ರೀ ವಿ. ಪ್ರಸನ್ನ ಕುಮಾರ್, ಭೂದಾಖಲೆಗಳ ಉಪನಿರ್ದೇಶಕರು ಮತ್ತು ಶ್ರೀ ಆರ್. ಸುರೇಶ್‌ರಾವ್, ಪ್ರಥಮ ದರ್ಜೆ ಭೂಮಾಪಕರು ರವರುಗಳ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಸಂಚಿತ ಪರಿಣಾಮ ಬೀರದಂತೆ ತಕ್ಷಣದಿಂದ ಜಾರಿಗೆ ಬರುವಂತೆ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 895

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಶ್ರೀ ಜಿ.ಎಸ್. ಗಡದವರ, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ಮತ್ತು ಶ್ರೀ ಎಸ್.ಎಸ್. ಗಾಣಗಿ ಪ್ರಥಮ ದರ್ಜೆ ಸಹಾಯಕರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಭೂದಾಸೇ (1) 2006, ದಿ: 27–04–2007.

2 ಆಯುಕ್ತರು ಭೂಕಂದಾಯ ವ್ಯವಸ್ಥೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆಯವರ ಕಾರಣ ಕೇಳಿ ನೋಟೀಸು ಸಂಖ್ಯೆ. ಸಿಬ್ಬಂದಿ. ಶಿಸ್ತು (ಎಂ1) 101:2002–2003, ದಿನಾಂಕ: 25–5–2006.

3 ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ರವರ ದಿ: 14–6–2006ರ ಲಿಖಿತ ರಕ್ಷಣ ಹೇಳಿಕೆ ಶ್ರೀ ಎಸ್.ಬಿ. ಗಾಣಗಿ, ಪ್ರ.ದ.ಸ. ರವರ ದಿ: 23–6–2006ರ ಲಿಖಿತ ಹೇಳಿಕೆ ಶ್ರೀ ಗಡದರವರ, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರುರವರ ದಿ: 7–6–2006ರ ಲಿಖಿತ ಹೇಳಿಕೆ.

4 ಆಯುಕ್ತರು, ಭೂಕಂದಾಯ ವ್ಯವಸ್ಥೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆರವರ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ. ಸಿಬ್ಬಂದಿ.ಶಿಸ್ತು (ಎಂ1).101:2002–03, ದಿ: 13–9–2006.

5 ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಸಂಖ್ಯೆ. ಸಿಬ್ಬಂದಿ.ಶಿಸ್ತು.(ಎಂ1) 01/2002–03, ದಿ:10–4–12007.

6 ಆಯುಕ್ತರು, ಭೂಕಂದಾಯ ವ್ಯವಸ್ಥೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆರವರ ಆರೋಪಿತರಿಗೆ 2ನೇ ಕಾರಣ ಕೇಳಿ ನೋಟೀಸು ಸಂಖ್ಯೆ. ಸಿಬ್ಬಂದಿ.ಶಿಸ್ತು.101/2002–03, ದಿ: 14–6–2007.

7 ಶ್ರೀ ಜಿ.ಎಸ್. ಗಡದವರ್‌ರವರ 2ನೇ ಕಾರಣ ಕೇಳಿ ನೋಟಿಸ್ಸಿಗೆ ದಿ: 20–6–2007ರ ಲಿಖಿತ ಉತ್ತರ.

8 ಶ್ರೀ ಬ್ಯಾಕೋಡಿ ರವರ 2ನೇ ಕಾರಣ ಕೇಳಿ ನೋಟೀಸ್ಸಿಗೆ ದಿ: 23–6–2007ರ ಲಿಖಿತ ಉತ್ತರ.

9 ಶ್ರೀ ಗಾಣಗಿ ರವರ 2ನೇ ಕಾರಣ ಕೇಳಿ ನೋಟೀಸ್ಸಿಗೆ ದಿ: 28–6–2007ರ ಲಿಖಿತ ಉತ್ತರ.

10 ಸರ್ಕಾರದ ಆದೇಶ ಸಂಖ್ಯೆ.ಕಂಇ 3 ಭೂದಾಸೇ (3) 2008, ದಿನಾಂಕ: 12–02–2008.

11 ಕರ್ನಾಟಕ ಲೋಕಸೇವಾ ಆಯೋಗಕ್ಕೆ ಬರೆದ ಸರ್ಕಾರದ ಪತ್ರ ಸಂಖ್ಯೆ.ಕಂಇ 3 ಭೂದಾಸೇ (3) 2008, ದಿನಾಂಕ: 12–02–08.

12 ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ. ಪಿಎಸ್‌ಸಿ.281:ಸಿಎನ್‌ಎಸ್.07, ದಿನಾಂಕ: 24–04–2008.

**ಪ್ರಸ್ತಾವನೆ:**

ಶ್ರೀ ಜಿ.ಎಸ್. ಗಡದವರ್, ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶ್ರೀ ಎಸ್.ಬಿ. ಬ್ಯಾಕೋಡಿ, ತಪಾಸಕರು ಮತ್ತು ಶ್ರೀ ಎಸ್.ಎಸ್. ಗಾಣಗಿ, ಪ್ರಥಮ ದರ್ಜೆ ಸಹಾಯಕರು ಇವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಕಛೇರಿ, ಬೆಳಗಾವಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, 1999–2000ನೇ ಸಾಲಿನ 23 ಉತಾರ ಅರ್ಜಿಗಳನ್ನು ವಿಲೇ ಮಾಡದೇ ಬಾಕಿ ಉಳಿಸಿಕೊಂಡಿರುವುದು, ಸರ್ಕಾರಿ ಹಣವನ್ನು ಖಜಾನೆಗೆ ಜಮಾ ಮಾಡದೇ ಕಛೇರಿಯಲ್ಲಿಯೇ ನಗದು ಉಳಿಸಿಕೊಂಡು, ತಾತ್ಕಾಲಿಕ ದುರುಪಯೋಗವಾಗಲು ಕಾರಣರಾಗಿದ್ದು, ಈ ಅಧಿಕಾರಿ ನೌಕರರು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇಧ 3,4 ಮತ್ತು 329ರಲ್ಲಿನ ಸೂಚನೆಗಳನ್ನು ಉಲ್ಲಂಘಿಸಿ, ಕರ್ತವ್ಯಲೋಪ ಎಸಗಿರುವ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 27–4–2006ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 13ರ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಂಟಿ ಇಲಾಖಾ ವಿಚಾರಣೆಯನ್ನು ಸದರಿ ನಿಯಮಾವಳಿಗಳ ನಿಯಮ 11 ಮತ್ತು 11(ಎ) ಅಥವಾ 12ರಲ್ಲಿನ ವಿಧಿವಿಧಾನಗಳನ್ನನುಸರಿಸಿ ನಡೆಸಲು ಅನುಮತಿ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 25–5–2006ರಲ್ಲಿ ಆರೋಪಿತರುಗಳಿಗೆ ಆರೋಪ ಪಟ್ಟಿ ಅನುಬಂಧ–1 ರಿಂದ 4 ಸೇರಿ ಕಾರಣ ಕೇಳಿ ನೋಟೀಸನ್ನು ಆಯುಕ್ತರು, ಭೂಮಾಪನ ಇಲಾಖೆರವರು ಹೊರಡಿಸಿರುತ್ತಾರೆ. ಸದರಿ ನೋಟೀಸುಗಳಿಗೆ ಆರೋಪಿತರುಗಳಾದ ಶ್ರೀ ಜಿ.ಎಸ್. ಗಡದವರ, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ದಿನಾಂಕ: 7–6–2006ರ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲೆ ಮಾಡಿರುವ ದೋಷಾರೋಪಣೆಗಳನ್ನು ಸಂಪೂರ್ಣವಾಗಿ ನಿರಾಕರಿಸಿರುತ್ತಾರೆ ಹಾಗೂ ವಿಚಾರಣೆಯನ್ನು ಕೈಬಿಡಬೇಕೆಂದು ಕೋರಿದ್ದಾರೆ. ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರುರವರು ದಿ: 14–6–2006ರಂದು ಲಿಖಿತ ಉತ್ತರ ನೀಡಿ ತಾವು ಯಾವುದೇ ಕರ್ತವ್ಯ ಲೋಪವೆಸಗಿರುವುದಿಲ್ಲ ಎಂದು ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸುತ್ತಾ, ಇಲಾಖಾ ವಿಚಾರಣೆಯಿಂದ

ಕೈಬಿಡಲು ಲಿಖಿತ ಉತ್ತರದಲ್ಲಿ ನಕಲು ಅರ್ಜಿಗಳನ್ನು ತನ್ನ ಹಂತದಲ್ಲಿ ಕಳೆದುಹೋಗಿರುವುದಿಲ್ಲ ನನ್ನ ಕರ್ತವ್ಯ ನಿರ್ವಹಣೆಯಲ್ಲಿ ಯಾವುದೆ ನಿರ್ಲಕ್ಷತೆ ತೋರಿರುವುದಿಲ್ಲ ಖಜಾನೆಗೆ ಹಣ ಭರಣೆ ಮಾಡಲು ಯಾವುದೆ ವಿಳಂಬವಾಗಿರುವುದಿಲ್ಲ ಆದುದರಿಂದ ತಮ್ಮ ಮೇಲೆ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆ ಎಂದು ತಮ್ಮನ್ನು ಇಲಾಖಾ ವಿಚಾರಣೆಯಿಂದ ಕೈಬಿಡಲು ಕೋರಿದ್ದಾರೆ.

ಈ ಆರೋಪಗಳ ಸಂಬಂಧ ಅವರುಗಳಿಗೆ ದೋಷಾರೋಪಣೆಗಳ ಬಗ್ಗೆ ಸತ್ಯಸತ್ಯತೆಗಳನ್ನು ಕಂಡುಕೊಳ್ಳಲು ಮೇಲೆ (4)ರಲ್ಲಿ ಓದಲಾದ ದಿ: 13–9–2006ರ ಆದೇಶದಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ)ರವರನ್ನು ವಿಚಾರಣಾಧಿಕಾರಿಯಾಯು ಹಾಗೂ ತಾಂತ್ರಿಕ ಸಹಾಯಕರು ಹಾಗೂ ಭೂದಾಖಲೆಗಳ ಉಪನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿ: 10–4–2007ರ ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿ

ಶ್ರೀ ಜಿ.ಎಸ್. ಗಡದವರ್, ಭೂ.ಉ.ನಿ.ರವರ ಮೇಲಿನ 3 ಆರೋಪಗಳ ಪೈಕಿ 2 ಆರೋಪಗಳು ಭಾಗಶಃ ಸಾಭೀತಾಗಿದ್ದು, ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ಮೇಲಿನ 4 ಆರೋಪಗಳ ಪೈಕಿ 2 ಆರೋಪಗಳು ಸಾಭೀತಾಗಿರುತ್ತದೆ ಹಾಗೂ ಶ್ರೀ ಎಸ್.ಎಸ್. ಗಾಣಗಿ ಇವರ ಮೇಲಿನ 3 ಆರೋಪಗಳ ಪೈಕಿ 2 ಆರೋಪಗಳು ಸಾಭೀತಾಗಿರುತ್ತದೆಂದು ವರದಿ ನೀಡಿರುತ್ತಾರೆ. ಈ ಬಗ್ಗೆ ಮೇಲೆ ಓದಲಾದ (6)ರ ದಿ: 14–6–2007ರ ಆರೋಪಿತರುಗಳಿಗೆ (7)ರಲ್ಲಿ ಓದಲಾದ ದಿ: 20–6–2007ರ ಹೇಳಿಕೆಯಲ್ಲಿ ಶ್ರೀ ಜಿ.ಎಸ್. ಗಡದವರ್ ವಿಚಾರಣಾ ವರದಿಯನ್ನು ಒಪ್ಪದೆ ತಮ್ಮ ಮೇಲಿನ ದೋಷರೋಪಣೆಗಳಿಂದ ಮುಕ್ತಗೊಳಿಸಬೇಕೆಂದು ಕೋರಿದ್ದಾರೆ. ಶ್ರೀ ಎಸ್.ಬಿ. ಬ್ಯಾಕೋಡಿ ರವರು ಮೆಲೆ (8)ರಲ್ಲಿ ಓದಲಾದ ದಿ: 23–6–2007ರ ಲಿಖಿತ ಹೇಳಿಕೆಯಲ್ಲಿ ತಮ್ಮ ವಿರುದ್ಧ ಸಾಕ್ಷಿದಾರರು ಯಾವುದೆ ನಿಖರವಾದ ಸಾಕ್ಷಿ ಹೇಳಿರುವುದಿಲ್ಲ. ತಾವು ನಿಷ್ಠೆಯಿಂದ ಕೆಲಸ ಮಾಡಿದ್ದು, ತಮ್ಮನ್ನು ದೋಷಮುಕ್ತರನ್ನಾಗಿ ಮಾಡಬೇಕೆಂದು ಕೋರುತ್ತಾ, ವಿಚಾರಣಾ ವರದಿಯನ್ನು ಒಪ್ಪಿರುವುದಿಲ್ಲ. ಶ್ರೀ ಗಾಣಗಿ, ಪ್ರ.ದ.ಸ. ರವರು ಮೇಲೆ (9)ರಲ್ಲಿ ಓದಲಾದ ದಿ: 28–6–2007ರ ಲಿಖಿತ ಹೇಳಿಕೆಯಲ್ಲಿ ಆರೋಪ 1 ಮತ್ತು 2ಕ್ಕೆ ಈಗಾಗಲೇ ವಿಚಾರಣೆಯಲ್ಲಿ ನೀಡಿದ ಹೇಳಿಕೆಗೆ ಬದ್ಧನಾಗಿರುತ್ತೇನೆ. ಆರೋಪ 3ಕ್ಕೆ ಸಂಬಂಧಿಸಿದಂತೆ ವಿಚಾರಣಾ ವರದಿಯ ಅಂಶಗಳನ್ನು ಒಪ್ಪುತ್ತೇನೆ. ತಮಗೆ ಯಾವುದೆ ದಂಡನೆಯನ್ನು ವಿಧಿಸಬಾರದೆಂದು ಕೋರಿರುತ್ತಾರೆ.

ವಿಚಾರಣಾ ವರದಿ ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಹಾಗೂ ಆರೋಪಿತರು 2ನೇ ಕಾರಣ ಕೇಳುವ ನೋಟೀಸ್‌ಗೆ ನೀಡಿರುವ ಹೇಳಿಕೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಅವರುಗಳ ಆರೋಪಗಳನ್ನು ಅಲ್ಲಗಳೆಯುವಂತ ಯಾವುದೇ ಸಾಕ್ಷ್ಯಪುರಾವೆಗಳನ್ನು ಒದಗಿಸಿರುವುದಿಲ್ಲವಾದ್ದರಿಂದ, ವಿಚಾರಣೆಯನ್ನು ವಿಚಾರಣಾಧಿಕಾರಿಗಳು ನಿಯಮಾನುಸಾರ ನಡೆಸಿರುವುದನ್ನು ಮನಗಂಡು ಹಾಗೂ ವಿಚಾರಣಾ ವರದಿಯ ಬಗ್ಗೆ ಆರೋಪಿತರುಗಳು ನೀಡಿರುವ ಹೇಳಿಕೆಯನ್ನು ತಿರಸ್ಕರಿಸಿ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಎಸ್.ಬಿ. ಬ್ಯಾಕೋಡಿ, ತಪಾಸಕರು ಈಗಾಗಲೇ ದಿ: 31–5–2006 ರಂದು ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 214(1) (ಎ) ರನ್ವಯ ಕ್ರಮ ಜರುಗಿಸಬೇಕಾಗಿರುವುದರಿಂದ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆದು ಪ್ರತ್ಯಕ್ಷವಾಗಿ ಅಂತಿಮ ಆದೇಶ ಹೊರಡಿಸಲು ನಿರ್ಧರಿಸಿ, ಉಳಿದಂತೆ ಹಾಲಿ ಸೇವೆಯಲ್ಲಿರುವ ಅಧಿಕಾರಿ ನೌಕರರ ಅಂದರೆ ಶ್ರೀ ಜಿ.ಎಸ್. ಗಡದವರ್, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಕಾರವಾರ ಮತ್ತು ಎಸ್.ಎಸ್. ಗಾಣಗಿ, ಪ್ರಥಮ ದರ್ಜೆ ಸಹಾಯಕರು, ತಹಸೀಲ್ದಾರ್ ಕಛೇರಿ, ಬೆಳಗಾಂ ರವರುಗಳ ವಿರುದ್ಧ ಸಾಭೀತಾದ ಆರೋಪಗಳ ಆದೇಶದಲ್ಲಿ ಸದರಿಯವರುಗಳಿಗೆ ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (iii)ರಡಿ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮಾತ್ರ 3 ವರ್ಷಗಳ ಅವಧಿಗೆ ಸಂಚಿತ ಪರಿಣಾಮ ಬೀದಂತೆ ತಕ್ಷಣದಿಂದ ಜಾರಿಗೆ ಬರುವಂತೆ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿರುತ್ತದೆ.

ಉಳಿದಂತೆ ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ಇವರ ಮೇಲಿನ ಆರೋಪವು ವಿಚಾರಣೆಯಿಂದ ಸಾಭೀತಾಗಿರುವುದರಿಂದ ಇವರ ನಿವೃತ್ತಿ ವೇತನದಲ್ಲಿ ಮಾಹೆಯಾನ ರೂ. 400–00ಗಳನ್ನು ಅವರ ನಿವೃತ್ತಿ ವೇತನದಿಂದ 3 ವರ್ಷಗಳವರಗೆ ಮಾಸಿಕವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ನಿರ್ಧರಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ (11) ರಲ್ಲಿ ಓದಲಾದ ದಿನಾಂಕ: 12–02–2008ರ ಪತ್ರದಲ್ಲಿ ಓದಲಾದ ದಿನಾಂಕ: 24—04–2008ರ ಪತ್ರದಲ್ಲಿ ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತಿ ತಪಾಸಕರು ಇವರ ನಿವೃತ್ತ ವೇತನದಿಂದ ತಿಂಗಳೊಂದಕ್ಕೆ ರೂ. 400–00 (ನಾಲ್ಕು ನೂರು ರೂಪಾಯಿಗಳು ಮಾತ್ರ)ರಂತೆ ಮೂರು ವರ್ಷಗಳವರೆಗೆ ಕಡಿತಗೊಳಿಸಬೇಕೆಂಬ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿರುತ್ತದೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಭೂದಾಸೇ (3) 2008, ಬೆಂಗಳೂರು ದಿನಾಂಕ: 21ನೇ ಮೇ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ಇವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಕಛೇರಿ, ಬೆಳಗಾವಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿದ ಕರ್ತವ್ಯ ಲೋಪದ ಆರೋಪವು ಸಾಬೀತಾಗಿರುವುದಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(1) (ಎ) ರನ್ವಯ ಇವರಿಗೆ ದೊರೆಯಬಹುದಾದ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳೊಂದಕ್ಕೆ ರೂ. 400–00 (ನಾಲ್ಕು ನೂರು ರೂಪಾಯಿಗಳು ಮಾತ್ರ)ಗಳನ್ನು ಮೂರು ವರ್ಷಗಳವರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಕಡಿತಗೊಳಿಸಲು ಸರ್ಕಾರವು ಆದೇಶಿಸಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 868

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಶ್ರೀ ಅಲ್ಲಾಭಕ್ಷ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ – ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 32 ಎಡಿಇ 2004, ದಿನಾಂಕ: 15–5–2004.:
2 ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಅ.ಸ. ಪತ್ರ ಸಂ: ಇಎಸ್‌ಟಿ (2) ಸಿಸಿಎ–4/04–05, ದಿನಾಂಕ: 21–04–2005.
3 ಸರ್ಕಾರದ ಆದೇಶ ಸಂ: ಕಂಇ: 32 ಎಡಿಇ 2004, ದಿನಾಂಕ: 12–9–2005.
4. ದಿನಾಂಕ: 12–9–2005ರ ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 32 ಎಡಿಇ 2004.
5. ಶ್ರೀ ಅಲ್ಲಾಭಕ್ಷ ನಿವೃತ್ತ ತಹಶೀಲ್ದಾರ್‌ರವರ ದಿನಾಂಕ: 5–1–2006ರ ಹೇಳಿಕೆ.
6 ಸರ್ಕಾರದ ಆದೇಶ ಸಂ: ಕಂಇ 32 ಎಡಿಇ 2004, ದಿನಾಂಕ 21–07–2006.
7 ವಿಚಾರಣಾಧಿಕಾರಿಗಳ ವರದಿ ದಿನಾಂಕ: 03–01–2007.

**ಪ್ರಸ್ತಾವನೆ:**

ಶ್ರೀ ಅಲ್ಲಾಭಕ್ಷ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು (ಹಾನಿ ನಿವೃತ್ತ) ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಅಧಿಕಾರ ವ್ಯಾಪ್ತಿ ಮೀರಿ ಅಕ್ರಮವಾಗಿ ಖಾತೆ ಬದಲಾವಣೆಗಳನ್ನು ಮಾಡಿರುವ ಹಿನ್ನಲೆಯಲ್ಲಿ ಅವರ ಈ ಕ್ರಮವನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಅವರ ವಿರುದ್ಧ ಇಲಾಖೆ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 15–5–2004ರ ಆದೇಶದಲ್ಲಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 21–4–2005ರ ಅ.ಸ. ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ದೋಷಾರೋಪಣೆ ಪಟ್ಟಿಯನ್ನು (ಅನುಬಂಧ 1 ರಿಂದ 4 ರವರೆಗೆ) ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಶ್ರೀ ಅಲ್ಲಾಭಕ್ಷರವರು ದಿನಾಂಕ: 31–5–2004ರಂದು ಸೇವೆಯಿಂದ ವಯೋ ನಿವೃತ್ತರಾಗಿರುವುದರಿಂದ ಸದರಿಯವರು ದೇವನಹಳ್ಳಿ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸಿದ ಅವಧಿಯ ಸಾಧಹಳ್ಳಿ ಗ್ರಾಮದ ಸರ್ವೆ ನಂ: 238, 239 ಮತ್ತು 240ರ ಜಮೀನು ಖಾತೆ ಬದಲಾವಣೆಗೆ ತಮ್ಮ ಅಧಿಕಾರ ವ್ಯಾಪ್ತಿ ಮೀರಿ ಆದೇಶ ಹೊರಡಿಸಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರವು ಭಾವಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ: 12–9–2005ರ ಆದೇಶದಲ್ಲಿ ಆದೇಶಿಸಿದೆ.

ಶ್ರೀ ಅಲ್ಲಾಭಕ್ಷರವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ದಿನಾಂಕ: 12–9–2005ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತಮವಾಗಿ ಸದರಿಯವರು ದಿನಾಂಕ: 4–10–2005 ರಂದು ಸಲ್ಲಿಸಿರುವ ಮನವಿಯಲ್ಲಿ ಅನುಬಂಧ–3ರ ದಾಖಲಾತಿ ನೀಡಲು ಕೋರಿದ್ದರು. ಈ ಬಗ್ಗೆ ಸರ್ಕಾರದ ದಿನಾಂಕ: 21–12–2005ರ ಹಿಂಬರಹದಲ್ಲಿ ಅನುಬಂಧ–3ರ ದಾಖಲಾತಿಗಳ ಪ್ರತಿಗಳೆಲ್ಲವನ್ನು ಒದಗಿಸಲು ಸಾಧ್ಯವಿರುವುದಿಲ್ಲವಾದ್ದರಿಂದ ಮೂಲ ದಾಖಲಾತಿಗಳನ್ನು ಕಛೇರಿಗೆ ಖುದ್ದಾಗಿ ಬಂದು ಪರಿಶೀಲಿಸಿ ಟಿಪ್ಪಣಿ ಗುರ್ತಿಸಿಕೊಂಡು ಹಿಂಬರಹ ತಲುಪಿದ ಹತ್ತು ದಿನಗಳೊಳಗಾಗಿ ದಿನಾಂಕ: 12–9–2005ರ ಕಾರಣ ಕೇಳುವ ನೋಟೀಸಿಗೆ ಉತ್ತರಿಸಲು ಕಾಲಾವಕಾಶವನ್ನು ನೀಡಲಾಗಿತ್ತು. ಅದರಂತೆ ಶ್ರೀ ಅಲ್ಲಾಭಕ್ಷರವರು ದಿನಾಂಕ: 02–01–2006ರಂದು ಕಛೇರಿಗೆ ಭೇಟಿ ನೀಡಿ ದಾಖಲೆಗಳನ್ನು ಪರಿಶೀಲಿಸಿರುತ್ತಾರೆ.

ಶ್ರೀ ಅಲ್ಲಾಭಕ್ಷರವರು ಮೇಲೆ ಕ್ರ.ಸಂ. (5)ರ ದಿನಾಂಕ: 5–1–2006ರಲ್ಲಿ ಲಿಖಿತ ಉತ್ತರದಲ್ಲಿ ಅವರ ಮೇಲಿನ ಆಪಾದನೆಗಳನ್ನು ಅಲ್ಲಗೆಳೆದು ಯಾವ ದುರ್ನಡತೆಯನ್ನು ಎಸಗಿರುವುದಿಲ್ಲವೆಂದು ತಿಳಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ಶ್ರೀ ಅಲ್ಲಾಭಕ್ಷ ರವರು ಸಲ್ಲಿಸಿದ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳು ಇರುವುದಿಲ್ಲವೆಂದು ಸರ್ಕಾರವು ತೀರ್ಮಾನಿಸಿ ಇವರ ವಿರುದ್ಧ ಆರೋಪದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಮೇಲೆ ಓದಲಾದ ಕ್ರ.ಸಂ. (6) ದಿನಾಂಕ: 21–7–2006ರ ಅದೇಶದಲ್ಲಿ ಶ್ರೀ ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (7), ದಿನಾಂಕ 3–1–2007ರನ್ವಯ ಶ್ರೀ ಅಲ್ಲಾಭಕ್ಷ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಆರೋಪಿತರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಅಲ್ಲಾಭಕ್ಷ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಇವರು ಈಗಾಗಲೇ ದಿನಾಂಕ: 31–5–2004ರಂದು ಸೇವೆಯಿಂದ ನಿವೃತ್ತರಾಗಿದ್ದು, ಇವರ ವಿರುದ್ಧ ಹೂಡಲಾಗಿದ್ದ ಆರೋಪದಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ದೃಢೀಕರಿಸಿಕೊಂಡು ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಒಪ್ಪಿ ಸದರಿಯವರ ವಿರುದ್ಧ ಮಾಡಲಾಗಿದ್ದ ಆರೋಪಗಳಿಂದ ಮುಕ್ತಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಎಡಿಇ 2004, ಬೆಂಗಳೂರು ದಿನಾಂಕ: 14ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಒಪ್ಪಿ, ಶ್ರೀ ಅಲ್ಲಾಭಕ್ಷ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ನು ಈ ಪ್ರಕರಣದ ಮಟ್ಟಿಗೆ ಆರೋಪ ಮುಕ್ತಗೊಳಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 870

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪ ತಹಶೀಲ್ದಾರ್ (ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ) ಮತ್ತು ಶ್ರೀ ದಶರಥ್‌ರಾವ್, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ನಾಡಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧ ಆಪಾದನೆಗೆ ಶಿಸ್ತು ಕ್ರಮದಿಂದ ಕೈಬಿಡುವ ಬಗ್ಗೆ ಆದೇಶಗಳು.

**ಉಲ್ಲೇಖ:**
1 ಮಾನ್ಯ ಲೋಕಾಯುಕ್ತ ಇವರ ತನಿಖಾ ವರದಿ ಸಂ: Compt/Uplok/BD-169/1994-95/ ARE-1 (50), Dt: 05-11-2004.
2 ಸರ್ಕಾರದ ಆದೇಶ ಸಂ: ಆರ್‌ಡಿ 78 ಎಡಿಇ 2004, ದಿನಾಂಕ: 17–01–2005.
3 ಮಾನ್ಯ ಉಪಲೋಕಾಯುಕ್ತ, ಕರ್ನಾಟಕ, ಬೆಂಗಳೂರು ಇವರ ಪತ್ರ ದಿನಾಂಕ: 20–03–2006.
4 ಮಾನ್ಯ ಉಪಲೋಕಾಯುಕ್ತ, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂ: Lok/ARE4/ ENQ11/2004-05, ದಿನಾಂಕ 07–9–2007

**ಪ್ರಸ್ತಾವನೆ:**

ಕರ್ನಾಟಕ ಲೋಕಾಯುಕ್ತದ ಮಾನ್ಯ ಲೋಕಾಯುಕ್ತರು ಮೇಲೆ (1)ರಲ್ಲಿ ಓದಲಾದ ದಿನಾಂಕ: 05–11–2004ರ ಪ್ರಸ್ತಾವನೆಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಮಂಡೂರು ಗ್ರಾಮದ ಸರ್ವೆ ನಂ: 128ರಲ್ಲಿ ಎಂ.ಆರ್ ಸಂ: 1/68–69ನ್ನು ತಿದ್ದಿ ಹೊಸದಾಗಿ ಪಿಳ್ಳಮ್ಮ ಕೋಂ ಚನ್ನರಾಯಪ್ಪ ಇವರ ಹೆಸರಿಗೆ ಫೋರ್ಜರಿ ಖಾತೆ ಮಾಡಿರುವ ಹಾಗೂ ಬದಲಾವಣೆ ವಹಿ ನಕಲನ್ನು ನೀಡಿರುವ ಆಪಾದನೆಗೆ ಶ್ರೀ ಬಿ ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್ ಮತ್ತು ಶ್ರೀ ದಶರಥರಾವ್, ಹಿಂದಿನ ದ್ವಿ.ದ.ಸ. ನಾಡಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳು ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡು ಬರುವುದರಿಂದ ಕರ್ನಾಟಕ ಲೋಕಾಯುಕ್ತ ಕಾಯಿದೆ 12(3)ರನ್ವಯ ಸದರಿಯವರುಗಳ ವಿರುದ್ಧ ಸದರಿ ಕಾಯಿದೆ 12(4) ರನ್ವಯ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ) ರನ್ವಯ ಜಂಟಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಲೋಕಾಯುಕ್ತರ ತನಿಖಾ ವರದಿಯನ್ನು ಪರಿಶೀಲಿಸಿ ಸರ್ಕಾರವು ಮೇಲೆ (2)ರಲ್ಲಿನ ದಿನಾಂಕ: 17–01–2005ರ ಆದೇಶದಲ್ಲಿ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್ ಮತ್ತು ಶ್ರೀ ದಶರಥ್‌ರಾವ್, ಹಿಂದಿನ ದ್ವ.ದ.ಸ. ನಾಡಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧದ ಆಪಾದನೆಯ ಮೇಲ್ನೋಟಕ್ಕೆ ಸಾಬೀತಾಗಿದ್ದರಿಂದ ಪ್ರಕರಣದ ಸತ್ಯೆತೆ ಕಂಡುಕೊಳ್ಳಲು ಪ್ರಕರಣವನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 14(ಎ) ರನ್ವಯ ಹಾಗೂ ಅದೇ ನಿಯಮಾವಳಿ ನಿಯಮ 11 (ಎ)

ಜೊತೆಗೆ 13 ರನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ, ಬೆಂಗಳೂರು ಇವರಿಗೆ ವಹಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 20-3-2006ರ ಪತ್ರದಲ್ಲಿ ಈ ಆಪಾದನೆಯಲ್ಲಿ ಸಿಲುಕಿರುವ ಆಪಾದಿತ (2) ಶ್ರೀ ದಶರಥರಾವ್, ಹಿಂದಿನ ದ್ವಿ.ದ.ಸ. ಇವರು ದಿನಾಂಕ: 31-3-2003ರಂದು ಸೇವೆಯಿಂದ ವಯೋ ನಿವೃತ್ತರಾಗಿರುತ್ತಾರೆ. ಈ ಘಟನೆಯು 1968-69ನೇ ಸಾಲಿನದಾಗಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, ನಿಯಮ 214 (2) (b) (ii) ರನ್ವಯ ಕ್ರಮ ಜರುಗಿಸಲು ಅವಕಾಶವಿರುವುದಿಲ್ಲ. ಆದ್ದರಿಂದ ಶ್ರೀ ದಶರಥ್‌ರಾವ್ (ವಯೋ ನಿವೃತ್ತ) ಇವರನ್ನು ಇಲಾಖಾ ವಿಚಾರಣೆಯಿಂದ ಕೈಬಿಡುವಂತೆ ಪ್ರಸ್ತಾಪಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ದಶರಥರಾವ್ ಇವರು ದಿನಾಂಕ: 31-3-2003 ರಂದು ಸೇವೆಯಿಂದ ವಯೋ ನಿವೃತ್ತರಾಗಿದ್ದು, ಈ ಪ್ರಕರಣದಲ್ಲಿ ದಿನಾಂಕ: 30-4-2005 ರಂದು ದೋಷಾರೋಪಣಾ ಪಟ್ಟಿ ಜಾರಿ ಮಾಡಿರುವುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ ಹಾಗೂ ಕೆ.ಸಿ.ಎಸ್.ಆರ್. ನಿಯಮ 214 (2) (ಬಿ) (ii) ರನ್ವಯ ಇಲಾಖಾ ವಿಚಾರಣೆ ಜರುಗಿಸಲು ನಿಯಮಾವಳಿಗಳಲ್ಲಿ ಅವಕಾಶವಿಲ್ಲವಾದ್ದರಿಂದ ಮೇಲೆ (4)ರಲ್ಲಿ ಓದಲಾದ ದಿನಾಂಕ: 13-6-2006ರ ಸರ್ಕಾರದ ಆದೇಶದಲ್ಲಿ ಶ್ರೀ ದಶರಥರಾವ್ ಇವರನ್ನು ಇಲಾಖಾ ವಿಚಾರಣೆಗೆ ವಹಿಸಿರುವುದನ್ನು ಕೈಬಿಡಲಾಗಿದೆ.

ಮೇಲೆ (5)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತರ ದಿನಾಂಕ: 07-09-2007ರ ಪತ್ರದಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಮಂಡೂರು ಗ್ರಾಮದ ಸರ್ವೆ ನಂ. 128ರಲ್ಲಿ ಎಂ.ಆರ್. 1/68 ತಿದ್ದಿ ಹೊಸದಾಗಿ ಪಿಳ್ಳಮ್ಮ ಕೋಂ ಚನ್ನರಾಯಪ್ಪ ಎಂಬುವವರ ಹೆಸರಿಗೆ ಪೋರ್ಜರಿ ಖಾತೆ ಮಾಡಿರುವ ಹಾಗೂ ಬದಲಾವಣೆ ವಹಿ ನಕಲನ್ನು ನೀಡಿರುವ ಆಪಾದನೆಗೆ ಆಪಾದಿತರಾದ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಶಿರಸ್ತೇದಾರ್, ನಾಡಕಛೇರಿ, ಬಿದರಹಳ್ಳಿ, ಇವರ ವಿರುದ್ಧ ನಿಯಮಾನುಸಾರ ಇಲಾಖಾ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣೆಯಲ್ಲಿ ಸಾಕ್ಷಿಗಳನ್ನು ಪರಿಶೀಲಿಸಲಾಗಿದ್ದು, ಆರೋಪಗಳು ಸಾಬೀತಾಗಿಲ್ಲವೆಂದು ತಿಳಿಸಿರುವ ದಾಖಲೆಗಳನ್ವಯ ಆರೋಪಿತ ನೌಕರರು ಖೊಟ್ಟೆ ಸಾಗುವಳಿ ಚೀಟಿಯನ್ನು ನೀಡಿರುವುದಿಲ್ಲವೆಂಬುದನ್ನು ಹಾಗೂ ಎಂ.ಆರ್. 1/68-69ನ್ನು ಮ್ಯುಟೇಷನ್ ರಿಜಿಸ್ಟರ್‌ನಲ್ಲಿ ಬರೆದಿರುವುದಿಲ್ಲವೆಂಬುದನ್ನು ಹಾಗೂ ವಿಚಾರಣೆಯಿಂದ ಕೈಬಿಟ್ಟಿರುವ 2ನೇ ಆರೋಪಿತ ನೌಕರರಾದ ಶ್ರೀ ದಶರಥರಾವ್ ಇವರು ಎಂ.ಆರ್/1/68-69 ಮ್ಯುಟೇಷನ್ ರಿಜಿಸ್ಟರ್‌ನ ಯಥಾ ನಕಲನ್ನು ತಯಾರು ಮಾಡಿ ತಾಳೆ ನೋಡಿ ಆಪಾದಿತ 1 ಶ್ರೀ ಬಿ. ಸಂಪತ್‌ಕುಮಾರ್, ಇವರಿಗೆ ಸಹಿಗಾಗಿ ಇಟ್ಟಿದ್ದು, ಒಂದನೇ ಆರೋಪಿತ ನೌಕರರು ಈ ನಕಲನ್ನು ಒಂದಾಗಿ ಆರೋಪಿ ತಾಳೆ ನೋಡಿರುತ್ತಾರೆಂದು ಪರಿಶೀಲಿಸಿ ಈ ನಕಲಿಗೆ ಸಹಿ ಮಾಡಿರುತ್ತಾರೆ. ಆದ್ದರಿಂದ 1ನೇ ಆರೋಪಿತರಾದ ಶ್ರೀ ಬಿ. ಸಂಪತ್‌ಕುಮಾರ್ ಇವರು ಈಗಾಗಲೇ ನಮೂದಾಗಿದ್ದು ರಿಜಿಸ್ಟರ್ ಯಥಾ ನಕಲನ್ನು ದೃಢೀಕರಿಸಿ ಸಹಿ ಮಾಡಿರುತ್ತಾರೆ ವಿನಃ ಎಂ.ಆರ್/1/68-69ನ್ನು ಸೃಷ್ಟಿಸಿರುವುದಿಲ್ಲವೆಂದು ದಾಖಲೆಗಳಿಂದ ಖಚಿತವಾಗಿರುತ್ತದೆ. ಆದುದರಿಂದ ಆರೋಪಿತ ನೌಕರರ ವಿರುದ್ಧ ಮಾಡಿರುವ ದೋಷಾರೋಪಣೆಗಳನ್ನು ಸಾಬೀತು ಮಾಡುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲವಾಗಿರುತ್ತದೆ ಎಂದು ತಿಳಿಸಿ ಈ ಪ್ರಕರಣದಲ್ಲಿ ಭಾಗಿಯಾಗಿದ್ದ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್ ಇವರ ವಿರುದ್ಧ ಹೂಡಲಾಗಿದ್ದ ಈ ಆಪಾದನೆಯಿಂದ ಕೈಬಿಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪಲೋಕಾಯುಕ್ತರ ವರದಿ ಹಾಗೂ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪ ತಹಶೀಲ್ದಾರ್ ನಾಡಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ವಿರುದ್ಧದ ಈ ಆಪಾದನೆಯಿಂದ ದೋಷ ಮುಕ್ತಗೊಳಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 78 ಎಡಿಇ 2006, ಬೆಂಗಳೂರು, ದಿನಾಂಕ: 20ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್, ನಾಡಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ದೇವಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿರುದ್ಧ ಹೂಡಿರುವ ಲೋಕಾಯುಕ್ತ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ದೋಷಮುಕ್ತಗೊಳಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 869

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 2008-09ನೇ ಸಾಲಿಗೆ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ತನ್ನ ಪಾಲಿನ ಮೊದಲನೇ ಕಂತಿನ ಅನುದಾನಕ್ಕೆ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು 18 ಜಿಲ್ಲೆಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ-12012/2/2008- NREGA Sl. No. 10 ದಿನಾಂಕ: 1-4-2008

**ಪ್ರಸ್ತಾವನೆ:**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ 2008-09ನೇ ಸಾಲಿಗೆ, ಕೇಂದ್ರ ಸರ್ಕಾರವು ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರೂ. 4472.94 ಲಕ್ಷಗಳನ್ನು ಮೊದಲನೇ ಕಂತಾಗಿ ಮೂರನೇ ಹಂತದ 18 ಜಿಲ್ಲೆಗಳಿಗೆ ಬಿಡುಗಡೆ ಮಾಡಿದೆ. ಇದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡಬೇಕಾಗಿದೆ. ಪ್ರಚಲಿತ ವರ್ಷದಲ್ಲಿ ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ಒದಗಿಸಿದೆ. ರಾಜ್ಯ ಸರ್ಕಾರವು ಶೇಕಡಾ 10ರಷ್ಟಿನ ತನ್ನ ಪಾಲಿನ ಅನುದಾನವಾದ ರೂ. 447.294 ಲಕ್ಷಗಳನ್ನು ಮೊದಲನೇ ಕಂತಾಗಿ ಅನುಬಂಧದಲ್ಲಿ ನಮೂದಿಸಿದಂತೆ ಸಾಮಗ್ರಿಗಳ ಬಳಕೆಗಾಗಿ ವೆಚ್ಚ ಮಾಡಲು ಮೂರನೇ ಹಂತದ ಹದಿನೆಂಟು ಜಿಲ್ಲೆಗಳಿಗೆ 2008-09ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 42 ಉಖಾಯೋ 08, ಬೆಂಗಳೂರು ದಿನಾಂಕ 26ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ-ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ 2008-09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಮೊದಲನೇ ಕಂತಿನ ಅನುದಾನಕ್ಕೆ ಅನುಗುಣವಾಗಿ, ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನದ ರೂ. 447.294 ಲಕ್ಷಗಳನ್ನು (ರೂ. ನಾಲ್ಕು ಕೋಟಿ, ನಲವತ್ತೇಳು ಲಕ್ಷಗಳು, ಇಪ್ಪತ್ತೊಂಬತ್ತು ಸಾವಿರದ ನಾಲ್ಕು ನೂರು ಮಾತ್ರ) ಮೂರನೇ ಹಂತದ 18 ಜಿಲ್ಲೆಗಳಿಗೆ ಅನುಬಂಧದಲ್ಲಿ ನಮೂದಿಸಿದಂತೆ 2008-09ನೇ ಸಾಲಿನಲ್ಲಿ ಸಾಮಗ್ರಿ ಘಟಕದ ವೆಚ್ಚಕ್ಕೆ ಮಾತ್ರ ಬಳಸಲು ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ.7.ಜೆಡ್‌ಪಿಎ 2003 ದಿನಾಂಕ: 14-7-2005 ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ ಅಇ 01 ಜಿಪಅ 07 ದಿನಾಂಕ 19-1-2007 ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮಾ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

**2008-09ನೇ ಸಾಲಿನ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ 2505 ಗ್ರಾಮೀಣ ಉದ್ಯೋಗ 02-ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101-ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0-01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ-059 ಇತರೆ ಖರ್ಚು (ಯೋಜನೆ) (2505-02-101-0-01-059)**

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1-2-2007 ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ-ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/234/ಪಿಬಿಎಸ್/2008 ದಿನಾಂಕ 23-5-2008ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ನಿರ್ದೇಶಕರು,

ಯೋಜನೆ, ಸಮನ್ವಯ ಮತ್ತು ಮೇಲ್ವಿಚಾರಣಾ ಘಟಕ,

ಹಾಗೂ ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ANNEXURE TO GO No. RDP 42 NRE 2008, BANGALORE DATED: 26-05-2008 RELEASING STATESHARE OF Ist INSTALMENT OF FUNDS UNDER NREGA FOR PHASE-III DISITRICTS**

| Sl. No. | District | Release of Central Share vide ltr.dt: 1-4-08 | State share being released in this order |
|---|---|---|---|
| 1. | Bagalkote | 224.78 | 22.478 |
| 2. | Bangalore Rural | 308.20 | 30.280 |
| 3. | Bangalore Urban | 239.29 | 23.929 |
| 4. | Bijapur | 263.35 | 26.335 |

| | | | |
|---|---|---|---|
| 5. | Chamarajanagar | 213.64 | 21.364 |
| 6. | Dakshina Kannada | 158.17 | 15.817 |
| 7. | Dharwad | 159.67 | 15.967 |
| 8. | Gadag | 171.00 | 17.100 |
| 9. | Haveri | 211.89 | 21.189 |
| 10. | Kolar | 542.28 | 54.228 |
| 11. | Koppal | 199.25 | 19.925 |
| 12. | Mandya | 190.88 | 19.088 |
| 13. | Mysore | 262.58 | 26.258 |
| 14. | Tumkur | 464.75 | 46.475 |
| 15. | Udupi | 131.17 | 13.117 |
| 16. | Uttara Kannada | 235.04 | 23.504 |
| 17. | Ramanagara | 248.50 | 24.850 |
| 18. | Chickaballapur | 248.50 | 24.850 |
| | **Total** | **4472.94** | **447.294** |

**C.M. SHIROL**

PR. 878

Director (PPMU),
Project, Planning Monitoring Unit,
E/o Additional Secretary to Government
Rural Development and Pan.Raj Dept.,

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಅಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜನೆ ಮತ್ತು ಆಯ್ಕೆ ಮಾಡುವ ಕುರಿತು – ರಾಜ್ಯ ಮಟ್ಟದ ಸಮಿತಿಯನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 384 ಪಸಸೇ 2002, ದಿನಾಂಕ: 24–02–2003.
2 ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 59 ಪಸಸೇ 2008, ದಿನಾಂಕ: 25–03–2008
3 ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಅಪಸಂ/ಶಿಕ್ಷಣ/ವಿವ–13/2007–08, ದಿನಾಂಕ: 07–05–2008

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಅಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜನೆ ಮತ್ತು ಆಯ್ಕೆ ಮಾಡಲು ನಿರ್ದೇಶಕರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ನಿರ್ದೇಶಕರ ಅಧ್ಯಕ್ಷತೆಯಲ್ಲಿದ್ದ ರಾಜ್ಯಮಟ್ಟದ ಸಮಿತಿಯನ್ನು ರದ್ದುಪಡಿಸಿ, ಆಯುಕ್ತರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಮಿತಿಯನ್ನು ಈ ಕೆಳಕಂಡಂತೆ ಪುನರ್‌ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1. | ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| 2. | ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು | ಸದಸ್ಯರು |
| 3. | ಸರ್ಕಾರದ ಉಪಕಾರ್ಯದರ್ಶಿಗಳು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು | ಸದಸ್ಯರು |
| 4. | ಅಪರ ನಿರ್ದೇಶಕರು (ಆಡಳಿತ) / ಜಂಟಿ ನಿರ್ದೇಶಕರು (ಆಡಳಿತ), ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಅರೆಸರ್ಕಾರಿ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಪ್ರಸ್ತುತ ಇಲಾಖಾ ಮುಖ್ಯಸ್ಥರಾಗಿ ಭಾರತೀಯ ಆಡಳಿತ ಸೇವೆಯ ಸೂಪರ್‌ಟೈಮ್ ಸ್ಕೇಲ್ ಅಧಿಕಾರಿಯನ್ನು ಇಲಾಖಾ ಆಯುಕ್ತರನ್ನಾಗಿ ಸರ್ಕಾರ ನೇಮಿಸಿದ್ದು, ಅದರಂತೆ ಆಯುಕ್ತರು ಕಾರ್ಯನಿರ್ವಹಿಸುತ್ತಿದ್ದಾರೆಂದು

ತಿಳಿಸಿ, ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 17 ಟಿಎಫ್‌ಫಿ 2005, ದಿನಾಂಕ: 23–11–2005ರಲ್ಲಿನ ಅನುಬಂಧ ಕ್ರಮಸಂಖ್ಯೆ: 2ರಲ್ಲಿ ಪ್ರತ್ಯಾಯೋಜಿಸಿರುವ ವಿಶೇಷ ವಿತ್ತಾಧಿಕಾರದನ್ವಯ ಉನ್ನತ ವ್ಯಾಸಂಗಕ್ಕೆ ಅಧಿಕಾರಿಗಳನ್ನು ಆಯ್ಕೆ ಮಾಡಲು ಮತ್ತು ಆಯ್ಕೆಯಾದ ಅಭ್ಯರ್ಥಿಗಳನ್ನು ಉನ್ನತ ವ್ಯಾಸಂಗಕ್ಕೆ ನಿಯೋಜಿಸಲು ಆಯುಕ್ತರಿಗೆ ಪೂರ್ಣ ಅಧಿಕಾರವಿರುವುದರಿಂದ, ಸದರಿ ಅಧಿಕಾರವನ್ನು ಚಲಾಯಿಸಲು ಮತ್ತು ಆಡಳಿತದಲ್ಲಿ ಅನಗತ್ಯ ವಿಳಂಬವನ್ನು ತಡೆಗಟ್ಟಲು, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 59 ಪಸಸೇ 2008, ದಿನಾಂಕ: 25–03–2008ರಲ್ಲಿ ಇಲಾಖೆಯ ಅಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಕುರಿತು ರಾಜ್ಯಮಟ್ಟದ ಸಮಿತಿಯನ್ನು ಪುನರ್‌ರಚಿಸಿರುವುದನ್ನು ಪುನರ್‌ಪರಿಶೀಲಿಸಿ, ದಿನಾಂಕ: 25–03–2008ರ ಆದೇಶ ಸಂಖ್ಯೆ: ಪಸಂಮೀ ಪಸಸೇ 2008ನ್ನು ರದ್ದುಪಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 144 ಪಸಸೇ 2008, ಬೆಂಗಳೂರು, ದಿನಾಂಕ 6ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ, ದಿನಾಂಕ: 23–11–2005ರ ಆದೇಶ ಸಂಖ್ಯೆ: ಎಫ್‌ಡಿ 17 ಟಿಎಫ್‌ಪಿ 2005ರ ಅನುಬಂಧದಲ್ಲಿನ ಅಂಶ–2ರ ಪ್ರಕಾರ ಆರ್ಥಿಕ ಇಲಾಖೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 61ರಂತೆ ಭಾರತದ ಒಳಗಿನ ತರಬೇತಿ ಮತ್ತು ಅಧ್ಯಯನಕ್ಕೆ ಅಧಿಕಾರಿಗಳನ್ನು ನಿಯೋಜಿಸಲು ಆಯುಕ್ತರಿಗೆ ಪೂರ್ಣ ಅಧಿಕಾರ ಪ್ರತ್ಯಾಯೋಜಿಸಿರುವ ಅಂಶವನ್ನು ಪರಿಗಣಿಸಿ, ದಿನಾಂಕ: 25–03–2008ರ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 59 ಪಸಸೇ 2008ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.929

**ಎಂ.ಪಿ. ನಾಗರಾಜ್**
ಪೀಠಾಧಿಕಾರಿ–2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 2007 ದಿನಾಂಕ; 20–03–2007.

2 ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಾಉಇ 15 ಎಂಇಎ 2007 ದಿನಾಂಕ: 18–10–2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 20–03–2007ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 07–03–2007 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಜಂಟಿ ಕಾರ್ಯದರ್ಶಿ | 1 ಹುದ್ದೆ |
| 2. | ಆರ್ಥಿಕ ಸಲಹೆಗಾರರು | 1 ಹುದ್ದೆ |
| 3. | ಉಪ ಕಾರ್ಯದರ್ಶಿ | 1 ಹುದ್ದೆ |
| 4. | ಅಧೀನ ಕಾರ್ಯದರ್ಶಿ | 2 ಹುದ್ದೆಗಳು |
| 5. | ಶಾಖಾಧಿಕಾರಿ | 3 ಹುದ್ದೆಗಳು |
| 6. | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 7. | ಭಾಷಾಂತರಕಾರರು (ಶಾಖಾಧಿಕಾರಿ) | 1 ಹುದ್ದೆ |
| 8. | ಹಿರಿಯ ಸಹಾಯಕರು | 2 ಹುದ್ದೆಗಳು |
| 9. | ಸಹಾಯಕ ಸಾಂಖ್ಯಿಕ ಅಧಿಕಾರಿ | 1 ಹುದ್ದೆ |
| 10. | ಶೀಘ್ರಲಿಪಿಗಾರರು (ಗಣಕ ಯಂತ್ರ ಜ್ಞಾನವುಳ್ಳವರು) | 12 ಹುದ್ದೆಗಳು |
| 11. | ಡಾಟಾ ಎಂಟ್ರಿ ಆಪರೇಟರ್ | 2 ಹುದ್ದೆಗಳು |
| 12. | ಸಹಾಯಕರು | 3 ಹುದ್ದೆಗಳು |
| 13. | ಕಿರಿಯ ಸಹಾಯಕರು | 5 ಹುದ್ದೆಗಳು |
| 14. | ಬೆರಳಚ್ಚುಗಾರರು | 1 ಹುದ್ದೆ |

| | | |
|---|---|---|
| 15. | ಚಾಲಕರು | 1 ಹುದ್ದೆ |
| 16. | ದಲಾಯತ್ | 11 ಹುದ್ದೆಗಳು |
| | **ಒಟ್ಟು** | **48 ಹುದ್ದೆಗಳು** |

ಮೇಲ್ಕಂಡ ಹುದ್ದೆಗಳ ಮುಂದುವರಿಕೆಯು ದಿ: 06-03-2008 ರಂದು ಮುಕ್ತಾಯಗೊಂಡಿರುವುದರಿಂದ ಈ ಹುದ್ದೆಗಳನ್ನು ದಿ: 07-03-2008 ರಿಂದು ಒಂದು ವರ್ಷದ ಅವಧಿಗೆ ಮುಂದುವರಿಸಬೇಕಾಗಿರುತ್ತದೆ. ಅದರಂತೆ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಸಅಸೇ 2008 ಬೆಂಗಳೂರು, ದಿನಾಂಕ: 28ನೇ ಮೇ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 07-03-2008 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಜಂಟಿ ಕಾರ್ಯದರ್ಶಿ | 1 ಹುದ್ದೆ |
| 2. | ಆರ್ಥಿಕ ಸಲಹೆಗಾರರು | 1 ಹುದ್ದೆ |
| 3. | ಉಪ ಕಾರ್ಯದರ್ಶಿ | 1 ಹುದ್ದೆ |
| 4. | ಅಧೀನ ಕಾರ್ಯದರ್ಶಿ | 2 ಹುದ್ದೆಗಳು |
| 5. | ಶಾಖಾಧಿಕಾರಿ | 3 ಹುದ್ದೆಗಳು |
| 6. | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 7. | ಭಾಷಾಂತರಕಾರರು (ಶಾಖಾಧಿಕಾರಿ) | 1 ಹುದ್ದೆ |
| 8. | ಹಿರಿಯ ಸಹಾಯಕರು | 2 ಹುದ್ದೆಗಳು |
| 9. | ಸಹಾಯಕ ಸಾಂಖ್ಯಿಕ ಅಧಿಕಾರಿ | 1 ಹುದ್ದೆ |
| 10. | ಶೀಘ್ರಲಿಪಿಗಾರರು (ಗಣಕ ಯಂತ್ರ ಜ್ಞಾನವುಳ್ಳವರು) | 12 ಹುದ್ದೆಗಳು |
| 11. | ಡಾಟಾ ಎಂಟ್ರಿ ಆಪರೇಟರ್ | 2 ಹುದ್ದೆಗಳು |
| 12. | ಸಹಾಯಕರು | 3 ಹುದ್ದೆಗಳು |
| 13. | ಕಿರಿಯ ಸಹಾಯಕರು | 5 ಹುದ್ದೆಗಳು |
| 14. | ಬೆರಳಚ್ಚುಗಾರರು | 1 ಹುದ್ದೆ |
| 15. | ಚಾಲಕರು | 1 ಹುದ್ದೆ |
| 16. | ದಲಾಯತ್ | 11 ಹುದ್ದೆಗಳು |
| | **ಒಟ್ಟು** | **48 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10-07-1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.930

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸವಿ 97 (ಭಾ) ದಿನಾಂಕ: 17-04-1998.
2 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಸಸಿವಿ 2007 ದಿನಾಂಕ:20-03-2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 12-03-1998 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಹಿರಿಯ ಸಹಾಯಕ ಭಾಷಾಂತರಕಾರರು | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5 | ವಾಹನ ಚಾಲಕ | 1 ಹುದ್ದೆ |

ಈ ತರುವಾಯ ಮೇಲಿನ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಅಂತಿಮವಾಗಿ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 01.04.2007 ರಿಂದ 31.03.2008 ರವರೆಗೆ ಮುಂದುವರಿಸಲಾಯಿತು. ಈ ಹುದ್ದೆಗಳನ್ನು ದಿನಾಂಕ: 01–04–2008 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಸಸವಿ 2007 ಬೆಂಗಳೂರು ದಿನಾಂಕ 3ನೇ ಜೂನ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 01–04–2008 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಹಿರಿಯ ಸಹಾಯಕ/ ಭಾಷಾಂತರಕಾರರು | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5 | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.931

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ (ಕಾರ್ಯಕಾರಿ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಯೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 95 ದಿನಾಂಕ: 18–12–1995 ಹಾಗೂ ತಿದ್ದೋಲೆ ದಿನಾಂಕ: 20–12–1995.

2 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 2006 ದಿನಾಂಕ: 22–03–2007.

3. ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 246 ಡಿಇವಿ 07 ದಿನಾಂಕ: 14–05–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಮತ್ತು ತಿದ್ದೋಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯಕಾರಿ ವಿಭಾಗದಲ್ಲಿ ಉಪ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |

ತರುವಾಯ ಮೇಲ್ಕಂಡ ತಾತ್ಕಾಲಿಕ ಹುದ್ದೆಗಳನ್ನು ವರ್ಷದಿಂದ ವರ್ಷಕ್ಕೆ ಮುಂದುವರಿಸುತ್ತಾ ಬರಲಾಗಿದ್ದು, ಅಂತಿಮವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 22–03–2007ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳ್ನು ದಿನಾಂಕ:

01–04–2007 ರಿಂದ ಮತ್ತು 31–03–2008 ರವರೆಗೆ ಮುಂದುವರಿಸಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 01–04–2008 ರಿಂದ ಮತ್ತೆ 2 ವರ್ಷಗಳ ಅವಧಿಗೆ ಮುಂದುವರಿಸುವಂತೆ ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಉಪ ಕಾರ್ಯದರ್ಶಿ (ಕಾರ್ಯಕಾರಿ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ಕೋರಿದ್ದಾರೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸಸಿವಿ 2007 ಬೆಂಗಳೂರು ದಿನಾಂಕ: 3ನೇ ಜೂನ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ (ಕಾರ್ಯಕಾರಿ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಡನೆ ದಿನಾಂಕ: 01–04–2008 ರಿಂದ ಎರಡು ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.932

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಅರ್ಹ ವೈದ್ಯಾಧಿಕಾರಿಗಳನ್ನು ಆಡಳಿತ ಹಿತದೃಷ್ಟಿಯಿಂದ ಸೂಕ್ತ ಸ್ಥಳಗಳಿಗೆ ನೇಮಿಸುವ/ವರ್ಗಾಯಿಸುವ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಆರ್‌ಸಿ/14/08–09 ದಿನಾಂಕ: 07–05–2008

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಆಯ್ಕೆಗೊಂಡು ನೇಮಕಾತಿ ಹೊಂದಿದ ವೈದ್ಯಾಧಿಕಾರಿಗಳು ಗ್ರಾಮಾಂತರ ಪ್ರದೇಶದ ಸರ್ಕಾರಿ ಆಸ್ಪತ್ರೆಗಳಲ್ಲಿ ಕಡ್ಡಾಯವಾಗಿ 06 ವರ್ಷ ಸೇವೆ ಸಲ್ಲಿಸಬೇಕೆಂದು ಷರತ್ತಿದ್ದರೂ ಕೆಲವು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಗ್ರಾಮಾಂತರ ಪ್ರದೇಶಗಳಿಗೆ ಹೋಗದೇ ಶಿಫಾರಸ್ಸು/ವರ್ಚಸ್ಸು ಪ್ರಭಾವ ಬೀರಿ ತಮಗೆ ಅನುಕೂಲವಾದ ಸ್ಥಳವನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ. ಈ ರೀತಿ ನೇಮಕವಾಗಿ 06 ವರ್ಷ ಸೇವೆ ಪೂರೈಸಿದ ನಂತರ ತಜ್ಞ/ಹಿರಿಯ ವೈದ್ಯಾಧಿಕಾರಿಯಾಗಿ ಪ್ರಥಮ ಕಾಲಮಿತಿ ಮುಂಬಡ್ತಿಯನ್ನು ಹಾಗೂ 13 ವರ್ಷವಾದ ನಂತರ 2ನೇ ಕಾಲಮಿತಿ ಮುಂಬಡ್ತಿ ಪಡೆದು ಹಿರಿಯ ತಜ್ಞ/ಉಪ ಮುಖ್ಯ ವೈದ್ಯಾಧಿಕಾರಿಯಾಗುವಾಗಲೂ ಕೂಡ ಅವರುಗಳು ತಮಗೆ ಬೇಕಾದ ಸ್ಥಳವನ್ನೇ ಆಯ್ಕೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಹಿರಿಯ ತಜ್ಞ/ಉಪ ಮುಖ್ಯ ವೈದ್ಯಾಧಿಕಾರಿಯಾದ ನಂತರ ಕೆಲವರು ಪ್ರಭಾವ/ವರ್ಚಸ್ಸು/ಶಿಫಾರಸ್ಸು/ಶಿಫಾರಸ್ಸು ಬೀರಿ ತಮಗೆ ಬೇಕಾದ ಆಡಳಿತಾತ್ಮಕ ಹುದ್ದೆಗಳಾದ ಜಿಲ್ಲಾ ಶಸ್ತ್ರ ಚಿಕಿತ್ಸಕರ ಹುದ್ದೆ ಅಥವಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಹುದ್ದೆಗಳನ್ನು ಪಡೆಯಲು ಪೈಪೋಟಿ ನಡೆಸುತ್ತಾರೆ. ಇಂತಹ ವ್ಯವಸ್ಥೆಯಿಂದ ಆಡಳಿತಾತ್ಮಕ ಹುದ್ದೆಗಳು ವರ್ಚಸ್ಸಿರುವವರ ಪಾಲಾಗುತ್ತಿದ್ದು, ಆಡಳಿತದಲ್ಲಿ ದಕ್ಷತೆ ಕುಂಠಿತವಾಗುತ್ತದೆ. ಮತ್ತು ಹಲವು ಸಂದರ್ಭಗಳಲ್ಲಿ ಜೇಷ್ಠತೆಯಲ್ಲಿ ಹಿರಿಯರಾದ ವೈದ್ಯಾಧಿಕಾರಿಗಳು, ಜೇಷ್ಠತೆಯಲ್ಲಿ ಕಿರಿಯರಾದ ವೈದ್ಯಾಧಿಕಾರಿಗಳ ಅಧೀನದಲ್ಲಿ ಕೆಲಸ ಮಾಡುವ ಪರಿಸ್ಥಿತಿ ಉಂಟಾಗಿ, ಶಿಸ್ತುಪಾಲನೆ, ಆಡಳಿತದಲ್ಲಿ ದಕ್ಷತೆ ಇವುಗಳು ಕುಂಠಿತವಾಗುತ್ತಿವೆ. ಈ ಕಾರಣಗಳಿಂದ ಕೆಲವು ವೈದ್ಯಾಧಿಕಾರಿಗಳಲ್ಲಿ ಅಸಮಾಧಾನ/ಅತೃಪ್ತಿಯುಂಟಾಗಿ ಕರ್ತವ್ಯದಲ್ಲಿ ಗುಣಮಟ್ಟ ಕಡಿಮೆಯಾಗುತ್ತಿರುವುದು ಕಂಡು ಬರುತ್ತಿದೆ ಹಾಗೂ ಕೆಲವರು ನ್ಯಾಯಾಲಯದ ಮೊರೆ ಹೋಗಿರುವ ಸಂದರ್ಭಗಳು ಉಂಟು. ಈ ಎಲ್ಲಾ ಕಾರಣಗಳಿಂದ ಇಲಾಖೆಯಲ್ಲಿನ ಅರ್ಹ ವೈದ್ಯಾಧಿಕಾರಿಗಳನ್ನು ಆಡಳಿತದ ಹಿತದೃಷ್ಟಿಯಿಂದ ಸೂಕ್ತ ಸ್ಥಳಗಳಿಗೆ ನೇಮಿಸುವ/ವರ್ಗಾಯಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 255 ಹೆಚ್‌ಎಸ್‌ಹೆಚ್ 2008, ಬೆಂಗಳೂರು, ದಿನಾಂಕ: 04ನೇ ಜೂನ್ 2008**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ದಂತ ಆರೋಗ್ಯಾಧಿಕಾರಿ/ಹಿರಿಯ ದಂತ ಆರೋಗ್ಯಾಧಿಕಾರಿ/ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ತಜ್ಞ ವೈದ್ಯಾಧಿಕಾರಿ/ಹಿರಿಯ ವೈದ್ಯಾಧಿಕಾರಿ/ಹಿರಿಯ ತಜ್ಞ / ಉಪ ಮುಖ್ಯ ವೈದ್ಯಾಧಿಕಾರಿ / ಜಿಲ್ಲಾ ಶಸ್ತ್ರಚಿಕಿತ್ಸಕರು/ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹುದ್ದೆಗೆ ಆಡಳಿತ ಹಿತದೃಷ್ಟಿಯಿಂದ ಸೂಕ್ತ ಸ್ಥಳಗಳಿಗೆ ನೇಮಿಸುವ/ವರ್ಗಾಯಿಸುವ ಬಗ್ಗೆ ಈ ಕೆಳಕಂಡ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಅನುಸರಿಸತಕ್ಕದ್ದು.

**ಮಾರ್ಗಸೂಚಿಗಳು**

1) (ಅ) ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ನೇಮಕಗೊಂಡ ವೈದ್ಯಾಧಿಕಾರಿಯನ್ನು ಕಡ್ಡಾಯವಾಗಿ ಗ್ರಾಮಾಂತರ ಪ್ರದೇಶದ ಆಸ್ಪತ್ರೆಯಲ್ಲಿ (ಅಂದರೆ ಪ್ರಾಥಮಿಕ ಆರೋಗ್ಯ ಕೇಂದ್ರ/ಪ್ರಾಥಮಿಕ ಆರೋಗ್ಯ ಘಟಕ/ಸಮುದಾಯ ಆರೋಗ್ಯ ಕೇಂದ್ರ) ಕನಿಷ್ಠ 6 ವರ್ಷಗಳ ಕಾಲ ಸೇವೆ ಸಲ್ಲಿಸಲೇಬೇಕು. ಹೀಗೆ 6 ವರ್ಷ ಗ್ರಾಮಾಂತರ ಸೇವೆ ಸಲ್ಲಿಸಿದ್ದರೆ ಮಾತ್ರ ಕಾಲಮಿತಿ ಬಡ್ತಿಗೆ ಅರ್ಹರಾಗುವರು. ಯಾವುದೇ ವೈದ್ಯರು ಸಲ್ಲಿಸಿದ ಗ್ರಾಮೀಣ ಸೇವೆ 6 ವರ್ಷಕ್ಕಿಂತ ಕಡಿಮೆ ಇದ್ದಲ್ಲಿ ಅಂತಹ ವೈದ್ಯರು ಉಳಿದ ಅವಧಿಯ ಗ್ರಾಮೀಣ ಸೇವೆ ಸಲ್ಲಿಸಿದ ನಂತರವೇ ಕಾಲಮಿತಿ ಬಡ್ತಿಗೆ ಅರ್ಹರಾಗುವರು. ಈ ರೀತಿ ನಿಗಧಿತ ಅವಧಿಯ ಗಾಮೀಣ ಸೇವೆ ಸಲ್ಲಿಸದ ಕಾರಣಕ್ಕಾಗಿ ಕಿರಿಯ ನೌಕರರು ಹಿರಿಯ ನೌಕರರಿಗಿಂತ ಮೊದಲು ಕಾಲಮಿತಿ ಬಡ್ತಿಗೆ ಅರ್ಹರಾದಲ್ಲಿ, ಕಿರಿಯ ನೌಕರರಿಗೆ ಜೇಷ್ಠತೆಯಲ್ಲಿ ಯಾವುದೇ ಹಕ್ಕು ಉಂಟಾಗುವುದಿಲ್ಲ.

(ಆ) ಸ್ನಾತಕೋತ್ತರ ಪದವಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳಿಗೆ ಈ ಷರತ್ತು ಅನ್ವಯವಾಗುವುದಿಲ್ಲ.

(ಇ) ಆಸ್ಪತ್ರೆಗಳಲ್ಲಿರುವ ನಿಗಧಿತ ತಜ್ಞರ ಹುದ್ದೆಗೆ ಅದೇ ತಜ್ಞತೆ ಹೊಂದಿರುವ ವೈದ್ಯರನ್ನು ಮಾತ್ರ ನೇಮಿಸತಕ್ಕದ್ದು.

2) ಸ್ನಾತಕೋತ್ತರ ಅಥವಾ ಗ್ರಾಮೀಣ ಪ್ರದೇಶದಲ್ಲಿ 6 ವರ್ಷಗಳ ಸೇವೆ ನಂತರ ಕಾಲಮಿತಿ ಬಡ್ತಿ ಪಡೆದ ತಜ್ಞರು/ಹಿರಿಯ ವೈದ್ಯಾಧಿಕಾರಿಗಳನ್ನು ತಾಲ್ಲೂಕು ವೈದ್ಯಾಧಿಕಾರಿ (ಟಿ.ಎಂ.ಓ.)/ತಾಲ್ಲೂಕು ಆರೋಗ್ಯಾಧಿಕಾರಿ (ಟಿ.ಹೆಚ್.ಓ)ಯಾಗಿ ನೇಮಿಸುವುದು.

3) 13 ವರ್ಷಗಳ ಜೇಷ್ಠತೆ ಹೊಂದಿದ ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿಗಳನ್ನು ಜಿಲ್ಲಾ ಕಾರ್ಯಕ್ರಮ ಅಧಿಕಾರಿಗಳನ್ನಾಗಿ ನೇಮಕಗೊಳಿಸುವುದು.

4) ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ವೈದ್ಯಾಧಿಕಾರಿ/ತಾಲ್ಲೂಕು ಆರೋಗ್ಯಾಧಿಕಾರಿಯಾಗಿ ಸೇವೆ ಸಲ್ಲಿಸಿದ ಹಾಗೂ ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿಗಳಿಗೆ ಆಧ್ಯತೆ ನೀಡುವುದರ ಜೊತೆಗೆ ದಕ್ಷ ಹಾಗೂ ಉತ್ತಮ ಸೇವಾ ಹಿನ್ನಲೆ ಹೊಂದಿದ ವೈದ್ಯಾಧಿಕಾರಿಗೆ ಜಿಲ್ಲಾ ಆಕುಕ ಅಧಿಕಾರಿ/ಜಿಲ್ಲಾ ಶಸ್ತ್ರಚಿಕಿತ್ಸಕರಾಗಿ ನೇಮಕಗೊಳ್ಳಲು ಜೇಷ್ಠತೆ ಮೇಲೆ ಅರ್ಹರಾಗಿರುತ್ತಾರೆ.

5) ಜಿಲ್ಲಾ ಆಕುಕ ಅಧಿಕಾರಿ/ಜಿಲ್ಲಾ ಶಸ್ತ್ರಚಿಕಿತ್ಸಕರಾಗಿ ಸೇವೆ ಸಲ್ಲಿಸಿದವರಿಗೆ ಸೇವಾ ಹಿರಿತನದ ಆಧಾರದ ಮೇಲೆ ಆಧ್ಯತೆ ನೀಡಿ ಕೇಂದ್ರ ಕಛೇರಿಯಲ್ಲಿ (ನಿರ್ದೇಶನಾಲಯ) ಉಪನಿರ್ದೇಶಕರ ಹುದ್ದೆಗೆ ನೇಮಿಸುವುದು.

6) ಮೇಲಿನಂತೆ ಎಲ್ಲಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ, ಅನುಭವವಿರುವವರಿಗೆ ಮಾತ್ರ ಆಧ್ಯತೆ ಮೇಲೆ ಜಂಟಿನಿರ್ದೇಶಕ/ ಅಪರನಿರ್ದೇಶಕ/ ನಿರ್ದೇಶಕ ಹುದ್ದೆಗಳಿಗೆ ಬಡ್ತಿ ನೀಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.933

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು–1)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀಮತಿ ಮಂಜುಳಾ ದೇವರಾಜ್, ಮಹಿಳಾ ಪಿ.ಐ. ಮತ್ತು ಶ್ರೀಮತಿ ರಾಜಲಕ್ಷ್ಮಿ, ಮಹಿಳಾ ಪಿ.ಐ. ರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಸಮ ಸಂಖ್ಯೆ ಆದೇಶ ದಿನಾಂಕ 27–07–2007.

2 ಶ್ರೀಮತಿ ಮಂಜುಳಾ ದೇವರಾಜ್, ನಿವೃತ್ತ ಸಹಾಯಕ ಪೊಲೀಸ್ ಕಮೀಷನರ್ ರವರ ಮನವಿ ದಿನಾಂಕ: 29–04–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಶ್ರೀಮತಿ ಮಂಜುಳಾ ದೇವರಾಜ್, ಮಹಿಳಾ ಪಿ.ಐ. ಪ್ರಸ್ತುತ ನಿವೃತ್ತ ಡಿ.ವೈ.ಎಸ್.ಪಿ. ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮ 1965/89 ನಿಯಮ 6 ಉಪ ನಿಯಮ 2 ಮತ್ತು 8ರ ಪ್ರಕಾರ ಮತ್ತು ಶೀಮತಿ ರಾಜಲಕ್ಷ್ಮಿ, ಮಹಿಳಾ ಪಿ.ಐ. ಇವರು ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಇವರ ವಿರುದ್ಧ ಕೆ.ಸಿ.ಎಸ್.ಆರ್.

ನಿಯಮ 214 (ಎ) ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶ ಡಿವೈ.ಎಸ್‌ಪಿ. ಸಿ.ಎ.ಆರ್ (ದಕ್ಷಿಣ) ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ನಂತರ ಶ್ರೀಮತಿ ಮಂಜುಳಾ ದೇವರಾಜ್, ಮಹಿಳಾ ಪಿ.ಐ. ಪ್ರಸ್ತುತ ನಿವೃತ್ತ ಡಿವೈ.ಎಸ್.ಪಿ. ಇವರು ದಿನಾಂಕ 29–04–2008 ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿ ಸದರಿ ಇಲಾಖಾ ವಿಚಾರಣೆಗೆ 2007ನೇ ಸಾಲಿನಲ್ಲಿಯೇ ಆದೇಶಿಸಿದ್ದರೂ ಇನ್ನೂ ವಿಚಾರಣೆ ಪ್ರಾರಂಭವಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಯಾದ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಸಿ.ಎ.ಆರ್. (ದಕ್ಷಿಣ) ಬೆಂಗಳೂರು ಈ ಹುದ್ದೆ ಖಾಲಿ ಇದ್ದು, ಇಲಾಖಾ ವಿಚಾರಣೆ ಮುಗಿದಿರುವುದಿಲ್ಲವೆಂದೂ, ಆದುದರಿಂದ ತಮ್ಮ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯನ್ನು ಕೂಡಲೇ ಮುಗಿಸಿಕೊಳ್ಳಲು ಅನುವಾಗುವಂತೆ ಬೇರೆ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಬೇಕೆಂದು ಮೇಲೆ ಓದಲಾದ (2)ರಲ್ಲಿ ಶ್ರೀಮತಿ ಮಂಜುಳಾ ದೇವರಾಜ್‌ರವರು ತಮ್ಮ ಮನವಿಯಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 401 ಪೊಸಿಪ 2006 ಬೆಂಗಳೂರು, ದಿನಾಂಕ: 09ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈಗಾಗಲೇ ಹೊರಡಿಸಿರುವ ಸರ್ಕಾರದ ಇದೇ ಸಮ ಸಂಖ್ಯೆಯ ದಿನಾಂಕ 27–07–2007ರ ಆದೇಶವನ್ನು ಭಾಗಶಃ ಮಾರ್ಪಡಿಸಿ, ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಸಿ.ಎ.ಆರ್. (ದಕ್ಷಿಣ) ಬೆಂಗಳೂರು ಇವರ ಬದಲಿಗೆ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಸಿ.ಎ.ಆರ್ (ಉತ್ತರ) ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಸದರಿ ದಿನಾಂಕ 27–07–2007ರ ಆದೇಶದಲ್ಲಿ ಉಳಿದ ಇತರ ಅಂಶಗಳ ಬಗೆಗಿನ ಆದೇಶಗಳು ಯಥಾವತ್ತಾಗಿ ಮುಂದುವರಿಯುತ್ತವೆ. ಈ ವಿಚಾರಣೆಯನ್ನು 3 ತಿಂಗಳ ಒಳಗೆ ಮುಗಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.934

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ.ಜಿ. ಗುರುದೇವ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 8ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಉಲ್ಲೇಖ:**
1 ಸರ್ಕಾರದ ಅಧಿಸೂಚನೆ–IV ನಂ. ಲಾ 123 ಪಿಪಿಇ 85, ದಿನಾಂಕ 05.08.1986.
2 ಸರ್ಕಾರದ ಆದೇಶ ನಂ. ಲಾ 188 ಪಿಪಿಇ 89, ದಿನಾಂಕ 16.1.1990.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಆದೇಶ ನಂ. ಡಿಪಿಎನ್/ಕೇಂಸ/ಜಿ–36/2000–01, ದಿನಾಂಕ 19.10.2002
4 ಸರ್ಕಾರದ ಅಧಿಸೂಚನೆ ಸಂಖ್ಯೆ ಒಇ 25 ಪಿಪಿಇ 2004 ದಿನಾಂಕ 21–07–2005.
5 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ–1/70/2000–01 ದಿನಾಂಕ 05.12.2000.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 05.08.1986ರ ಸರ್ಕಾರದ ಅಧಿಸೂಚನೆ ಹೆಚ್ಚುವರಿ ಪಟ್ಟಿ ಕ್ರ.ಸಂ. 2ರನ್ವಯ ಶ್ರೀ ಜಿ.ಜಿ. ಗುರುದೇವ ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 18.08.1986ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 16.1.1990ರ ಸರ್ಕಾರದ ಆದೇಶದಲ್ಲಿ ದಿನಾಂಕ 19.10.1989 ರಿಂದ ಜಾರಿಗೆ ಬರುವಂತೆ ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

ಸದರಿಯವರು ಸದರಿ ಹುದ್ದೆಯಲ್ಲಿ ದಿನಾಂಕ 18.08.1986ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ ದಿನಾಂಕ 18.08.1996ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ದಿನಾಂಕ 18.08.1986 ರಿಂದ 18.08.1996ರ ಸೇವಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆಯನ್ನು ಉಪಯೋಗಿಸಿಕೊಂಡಿರುವುದಿಲ್ಲ ಹಾಗೂ ನಿರಂತರ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಸದರಿ ಅಧಿಕಾರಿಯವರು ಮಾಗಡಿ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮಾಗಡಿ ಪೊಲೀಸ್ ಠಾಣೆಯ ಮೊಕದ್ದಮೆ ನಂ. 210/2000, ಭಾ.ದಂ.ಸಂ. ಕಲಂ 379ರ ರೀತ್ಯಾ ಶಿಕ್ಷಾರ್ಹ ಅಪರಾಧಕ್ಕೆ ಸಂಬಂಧಿಸಿದ ಆರೋಪಿಗಳು ಸಲ್ಲಿಸಿದ್ದ ಜಾಮೀನು ಅರ್ಜಿಯ ಮೇಲೆ "ಕಾಪಿ ರಿಸೀವ್ಡ್ ಆನ್ ಕಂಡೀಷನ್ ಎಟ್ ಮೇ ಬಿ ಅಲೋಡ್" ಎಂದು ಹಿಂಬರಹ ನೀಡಿ, ಜಾಮೀನು ರಹಿತ ಪ್ರಕರಣದಲ್ಲಿ ಆರೋಪಿ ಜಾಮೀನು

ಪಡೆಯಲು ಸಹಕಾರಿಯಾಗಿದ್ದರಿಂದ, ಇವರ ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷತನ ತೋರಿ ಬೇಜವಾಬ್ದಾರಿಯಿಂದ ನಡೆದುಕೊಂಡಿರುತ್ತಾರೆಂಬ ಆರೋಪದ ಮೇಲೆ ವಿಚಾರಣೆ ನಡೆಸಲಾಗಿದ್ದು, ಸದರಿ ವಿಚಾರಣೆಯಲ್ಲಿ ಇವರ ಮೇಲಿನ ಆರೋಪಗಳು ರುಜುವಾತಾಗಿಲ್ಲದಿದ್ದುದರಿಂದ ಸದರಿ ಅಧಿಕಾರಿಯವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ನು ಮೇಲೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಆದೇಶದಲ್ಲಿ ಕೈಬಿಡಲಾಗಿದೆ. ಉಳಿದಂತೆ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ / ತನಿಖೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ.

ಸದರಿ ಅಧಿಕಾರಿಯವರಿಗೆ ಮೇಲೆ ಓದಲಾದ (4)ರ ಸರ್ಕಾರದ ಅಧಿಸೂಚನೆಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರಕಿದ್ದು, ದಿನಾಂಕ 3.8.2005 ರಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ ದಿನಾಂಕ 18.08.1996ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ ಹಾಗೂ ಸದರಿ ಅಧಿಕಾರಿಯವರಿಗೆ ಸದರಿ 10 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಬಡ್ತಿ ನೀಡಿರುವುದಿಲ್ಲ ಮತ್ತು ಅವರು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (5)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ನಿವೃತ್ತ ಅಧಿಕಾರಿಯವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ದಿನಾಂಕ 19.08.1996ರಿಂದ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 287 ಪಿಪಿಇ 2006, ಬೆಂಗಳೂರು, ದಿನಾಂಕ 7ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಜಿ.ಜಿ. ಗುರುದೇವ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 8ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ ಅವರಿಗೆ ದಿನಾಂಕ 19.08.1996 ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ನಂ. ಎಫ್‌ಡಿ 88 ಎಸ್‌ಆರ್‌ಪಿ (ಸಿಎಸ್‌ಸಿ) 81, ದಿನಾಂಕ 27.03.1982ರ ಅನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ವೇತನ ಶ್ರೇಣಿ ರೂ. 6000–150–7200–200–8800–260–10880–320–11200 ರಿಂದ ನಂತರದ ವೇತನ ಶ್ರೇಣಿ ರೂ.6300–150–7200–200–8800–260–10880–320–11840ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.935

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ:** ಪ್ರಕೃತಿ ವಿಕೋಪದಂತಹ ಸಂದರ್ಭಗಳಲ್ಲಿ ತುರ್ತು ಕಾರ್ಯಕ್ಕಾಗಿ ಉಪಯೋಗಿಸಲು ಜಿಲ್ಲಾಧಿಕಾರಿಗಳಿಗೆ ವಾಹನ ಒದಗಿಸುವ ಬಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 2006, ದಿ: 1.3.2008.
2 ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಪತ್ರ ಸಂಖ್ಯೆ: ಸಿಎಎಲ್/ಸಿಆರ್ 30/07–08 ದಿ: 28.5.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ರೂ. 5.50 ಲಕ್ಷಗಳ ಮಿತಿಗೆ ಒಳಪಟ್ಟು ಒಂದು ವಾಹನವನ್ನು (4 Wheeler) 2007–08ನೇ ಆರ್ಥಿಕ ವರ್ಷದಲ್ಲಿ ಖರೀದಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಚಿಕ್ಕಬಳ್ಳಾಪುರ ಇವರು ಚುನಾವಣೆ ಪ್ರಕ್ರಿಯೆ ಚಾಲ್ತಿಯಲ್ಲಿದ್ದುದರಿಂದ ಖರೀದಿ ಪ್ರಕ್ರಿಯೆ ವಿಳಂಬವಾಗಿ 2007–08ನೇ ಆರ್ಥಿಕ ವರ್ಷದಲ್ಲಿ ಖರೀದಿಸಲು ಸಾಧ್ಯವಾಗದೇ ಇರುವುದರಿಂದ 2008–09ನೇ ಆರ್ಥಿಕ ವರ್ಷದಲ್ಲಿ ವಾಹನ ಖರೀದಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 206, ಬೆಂಗಳೂರು, ದಿನಾಂಕ 11ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರಿಗೆ 2008–09ನೇ ಸಾಲಿನ ಆರ್ಥಿಕ ವರ್ಷದಲ್ಲಿ ಒಂದು ವಾಹವನ್ನು (4 wheller) ಖರೀದಿಸಲು ಮಂಜೂರಾತಿ ನೀಡಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಕಂಇ 311 ಟಿಎನ್‌ಆರ್ 2006, ದಿ: 1.3.2008ರಲ್ಲಿ ವಿಧಿಸಿದ್ದ ಇತರೆ ಎಲ್ಲ ಷರತ್ತುಗಳನ್ನು ವಾಹನ ಖರೀದಿಸುವಾಗ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.936

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವಿಕ್ಟೋರಿಯಾ ಆಸ್ಪತ್ರೆ ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಇಲ್ಲಿ ಟ್ರಾಮ ಕೇರ್ ಸೆಂಟರ್ ಮತ್ತು ತುರ್ತು ಚಿಕಿತ್ಸಾ ಘಟಕಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** 1 ಪತ್ರ ಸಂಖ್ಯೆ: ಬಿಎಂಸಿ/ಎಸ್‌ಯುಪಿ/105/2007–08 ದಿನಾಂಕ 26.12.2007
2 ಪತ್ರ ಸಂಖ್ಯೆ: ಬಿಎಂಸಿಆರ್‌ಐ/ಇಎಸ್‌ಟಿ (3) 31/2007–08 ದಿನಾಂಕ 03–04–2008.

**ಪ್ರಸ್ತಾವನೆ:**

ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದಕ್ಕೆ ಹೊಂದಿಕೊಂಡಂತೆ ಐದು ಬೋಧನಾ ಆಸ್ಪತ್ರೆಗಳು ಇರುತ್ತದೆ. ಇವುಗಳ ಪೈಕಿ ವಿಕ್ಟೋರಿಯಾ ಆಸ್ಪತ್ರೆ ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಗಳು ಇರುತ್ತವೆ.

ಬೆಂಗಳೂರು ಬೃಹತ್ ಮಹಾನಗರ ಪಾಲಿಕೆ ಪ್ರದೇಶವು 748 ಚದರ ಕಿ.ಮೀ. ವ್ಯಾಪಿಸಿದ್ದು ಪ್ರಪಂಚದಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಎರಡನೇ ನಗರವಾಗಿರುತ್ತದೆ. ಸುಮಾರು 44 ಲಕ್ಷ ವಾಹನಗಳು ಇರುತ್ತವೆ.

ಬೆಂಗಳೂರು ಬೃಹತ್ ಮಹಾನಗರ ಪಾಲಿಕೆ ಪ್ರದೇಶದಲ್ಲಿರುವ ಕೆಲವಾರು ಖಾಸಗಿ ಆಸ್ಪತ್ರೆಗಳು ನರ, ಪ್ಲಾಸ್ಟಿಕ್ ಸರ್ಜರಿ ಮತ್ತು ಆಸ್ಥಿ ಚಿಕಿತ್ಸೆಗಳು L1 Level Teritary ಮಟ್ಟದ ತೀವ್ರ ನಿಗಾ ಘಟಕಗಳನ್ನು ಹೊಂದಿರುತ್ತವೆ. ಆದರೆ ಸಮಾಜ ಮಧ್ಯಮ ಮತ್ತು ಕೆಳವರ್ಗದ ಸಾವಿರದ ಇನ್ನೂರು ರೋಗಿಗಳು ಪ್ರತಿದಿನ ಬರುವ ವಿಕ್ಟೋರಿಯಾ ಆಸ್ಪತ್ರೆ ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಗಳಲ್ಲಿ ತೀವ್ರ ನಿಗಾ ಘಟಕಗಳು ಇರುವುದಿಲ್ಲ. ಇದರಿಂದ ತುರ್ತು ರೋಗಿಗಳಿಗೆ ಸಕಾಲಿಕ ಚಿಕಿತ್ಸಾ ಸೇವೆಯನ್ನು ಒದಗಿಸಲು ಸಾಧ್ಯವಾಗಿರುವುದಿಲ್ಲ. ಪ್ರಯುಕ್ತ ಈ ಎರಡು ಆಸ್ಪತ್ರೆಗಳಲ್ಲಿ ಟ್ರಾಮ ಕೇರ್ ಸೆಂಟರ್ ಮತ್ತು ತೀವ್ರ ನಿಗಾ ಘಟಕಗಳ ಅವಶ್ಯಕತೆ ಇರುವುದನ್ನು ಸರ್ಕಾರವು ಮನಗಂಡಿದೆ.

ನಿರ್ದೇಶಕರು/ಡೀನ್, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ರವರು ಮೇಲೆ (1) ಮತ್ತು (2)ರಲ್ಲಿ ತಮ್ಮ ಪತ್ರಗಳಲ್ಲಿ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಗಳಲ್ಲಿ ತಲಾ ಒಂದೊಂದು ತೀವ್ರ ನಿಗಾ ಘಟಕ, ಟ್ರಾಮ ಕೇರ್ ಘಟಕ ಮತ್ತು ಸ್ಟೆಪ್ ಡೌನ್ ತೀವ್ರ ನಿಗಾ ಘಟಕವನ್ನು ಸ್ಥಾಪಿಸಲು ವಿವಿಧ ವೃಂದಗಳಿಗೆ ಸೇರಿದ 142 ಹುದ್ದೆಗಳನ್ನು ಸೃಜಿಸುವಂತೆ ಮತ್ತು ಸಿಬ್ಬಂದಿ ವೆಚ್ಚಕ್ಕಾಗಿ ರೂ. 3,30,39,463.00 ಗಳನ್ನು ಮತ್ತು ಉಪಕರಣ ಖರೀದಿಗಾಗಿ ರೂ. 8.12 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಇಲ್ಲಿ ತಲಾ ಒಂದೊಂದು ತೀವ್ರ ನಿಗಾ ಘಟಕ, ಟ್ರಾಮ ಕೇರ್ ಘಟಕ ಮತ್ತ ಸ್ಟೆಪ್ ಡೌನ್ ತೀವ್ರ ನಿಗಾ ಘಟಕವನ್ನು ಸ್ಥಾಪಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 1 ಎಂಎಸ್‌ಎಫ್ 2008, ಬೆಂಗಳೂರು, ದಿನಾಂಕ 09ನೇ ಜೂನ್ 2008**

ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಇಲ್ಲಿ ತಲಾ ಒಂದೊಂದು ಇನ್‌ಟೆನ್ಸಿವ್ ಕೇರ್ ಯುನಿಟ್, ಟ್ರಾಮ ಕೇರ್ ಯುನಿಟ್ ಮತ್ತು ಸ್ಟೆಪ್ ಡೌನ್ ಐಸಿಯು ಘಟಕವನ್ನು ಅವುಗಳ ಎದುರಿಗೆ ನಮೂದಿಸಿರುವ ಸಾಮರ್ಥ್ಯದೊಂದಿಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಘಟಕಗಳು | ವಿಕ್ಟೋರಿಯಾ ಆಸ್ಪತ್ರೆ ಹಾಸಿಗೆಗಳ ಸಂಖ್ಯೆ | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಹಾಸಿಗೆಗಳ ಸಂಖ್ಯೆ | ಒಟ್ಟು ಹಾಸಿಗೆಗಳು |
|---|---|---|---|---|
| 1. | ಇನ್‌ಟೆನ್ಸಿವ್ ಕೇರ್ ಯುನಿಟ್ | 10 | 10 | 20 |
| 2. | ಟ್ರಾಮ ಕೇರ್ ಯುನಿಟ್ | 10 | 10 | 20 |
| 3. | ಸ್ಟೆಪ್ ಡೌನ್ ಐಸಿಯು | 10 | 10 | 20 |
| | **ಒಟ್ಟು** | **30** | **30** | **60** |

ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಮತ್ತು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಇಲ್ಲಿನ ಇನ್‌ಟೆನ್‌ಸಿವ್ ಕೇರ್ ಯುನಿಟ್, ಟ್ರಾಮ ಕೇರ್ ಯುನಿಟ್ ಮತ್ತು ಸ್ಟೆಪ್ ಡೌನ್ ಐಸಿಯು ಗಳಿಗಾಗಿ ಈ ಕೆಳಗಿನ ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಸೃಜಿಸಲಾಗಿದೆ.

| ಕ್ರ.ಸಂ. | ವೃಂದ | ವಿಕ್ಟೋರಿಯಾ ಆಸ್ಪತ್ರೆ ಹುದ್ದೆಗಳ ಸಂಖ್ಯೆ | ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಹುದ್ದೆಗಳ ಸಂಖ್ಯೆ | ಒಟ್ಟು ಹುದ್ದೆಗಳು |
|---|---|---|---|---|
| 1. | ಅಸೋಸಿಯೆಟ್ ಪ್ರೋಫೆಸರ್ (ಜನರಲ್ ಮೆಡಿಸಿನ್) | 2 | 2 | 4 |
| 2. | ಅಸೋಸಿಯೆಟ್ ಪ್ರೋಫೆಸರ್ (ಅನೇಸ್ತೀಷಿಯಾ) | 2 | 2 | 4 |
| 3. | ಅಸೋಸಿಯೆಟ್ ಪ್ರೋಫೆಸರ್ (ಸರ್ಜರಿ) | 2 | 2 | 4 |
| 4. | ಜೂನಿಯರ್ ರೆಸಿಡೆಂಟ್ಸ್ | 20 | 20 | 40 |
| 5. | ಸ್ಟಾಫ್ ನರ್ಸ್ (ಐಸಿಯು) | 30 | 30 | 60 |
| 6. | ಡಿ ಗ್ರೂಪ್ ಸ್ಟಾಫ್ | 15 | 15 | 30 |
| | **ಒಟ್ಟು** | **71** | **71** | **142** |

ಸೃಜಿಸಲಾಗಿರುವ ಸ್ಟಾಫ್ ನರ್ಸ್‌ಗಳ ಶೇ. 50ರಷ್ಟು ಹುದ್ದೆಗಳನ್ನು ನೇರ ನೇಮಕಾತಿಯ ಮೂಲಕ ಮತ್ತು ಉಳಿದ ಹುದ್ದೆಗಳನ್ನು ಸ್ಟೈಪೆಂಡರಿ ಆಧಾರದ ಮೇಲೆ ನೇಮಕಗೊಂಡಿರುವ ನೌಕರರಿಂದ ತುಂಬತಕ್ಕದ್ದು.

ಸಮೂಹ ಡಿ ವೃಂದದ ಹುದ್ದೆಗಳಿಗೆ ಬಾಹ್ಯ ಮೂಲದ ಆಧಾರದ ಮೇಲೆ ನೇಮಿಸಿಕೊಳ್ಳತಕ್ಕದ್ದು.

ಕಟ್ಟಡ ಮತ್ತು ಉಪಕರಣಗಳಿಗಾಗಿ ಪ್ರತ್ಯೇಕ ಅಂದಾಜುಗಳನ್ನು ತಯಾರಿಸತಕ್ಕದ್ದು.

ಸಾಧ್ಯವಾದ ಮಟ್ಟಿಗೆ ವಿತ್ತ ಆಯೋಗದ ಮೂಲಕದ ಕೇಂದ್ರ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು.

ಸಿಬ್ಬಂದಿ ವೆಚ್ಚಕ್ಕಾಗಿ ರೂ. 3,30,39,463.00 (ರೂಪಾಯಿ ಮೂರು ಕೋಟಿ ಮೂವತ್ತು ಲಕ್ಷ ಮೂವತ್ತೊಂಬತ್ತು ಸಾವಿರದ ನಾನೂರ ಅರವತ್ತು ಮೂರು ಮಾತ್ರ)ಗಳನ್ನು ಮತ್ತು ಉಪಕರಣ ಖರೀದಿಗಾಗಿ ರೂ. 8.12 (ರೂಪಾಯಿ ಎಂಟು ಕೋಟಿ ಹನ್ನೆರಡು ಲಕ್ಷ ಮಾತ್ರ)ಗಳನ್ನು ಒದಗಿಸಲಾಗಿದೆ.

ಉಪಕರಣ ಖರೀದಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ನಿಯಮ 2000ದ ಪ್ರಕಾರ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 343 ವೆಚ್ಚ:5/2008, ದಿನಾಂಕ 19-05-2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.937

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಕಾರ್ಯಾಲಯದ ದಿನಾಂಕ 9.6.2008ರ ಫ್ಯಾಕ್ಸ್ ಸಂದೇಶದ ಟಿಪ್ಪಣಿ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 9-6-2008ರ ಫ್ಯಾಕ್ಸ್ ಸಂದೇಶದ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರು ಪ್ರಸ್ತುತ ಸಾಲಿನಲ್ಲಿ 29 ಜಿಲ್ಲೆಗಳ ಉಸ್ತುವಾರಿ ಸಚಿವರುಗಳನ್ನು ನೇಮಕ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿ, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಜಿಲ್ಲೆಯ ಉಸ್ತುವಾರಿ ಸಚಿವರುಗಳನ್ನಾಗಿ ನೇಮಕ ಮಾಡಲು ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 41 ಯೋವಿವಿ 2008 ಬೆಂಗಳೂರು ದಿನಾಂಕ: 9ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಜಿಲ್ಲಾಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧದಲ್ಲಿ ಸಚಿವರುಗಳನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿದ ಜಿಲ್ಲೆಗಳ ಜಿಲ್ಲಾ ಉಸ್ತುವಾರಿ ಸಚಿವರುಗಳನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಯೋಇ 41 ಯೋವಿವಿ 2008, ದಿನಾಂಕ: 9–06–2008**

| ಕ್ರಮ ಸಂಖ್ಯೆ | ಸಚಿವರುಗಳ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1. | ಶ್ರೀ ಬಿ.ಎಸ್. ಯಡಿಯೂರಪ್ಪ ಮುಖ್ಯಮಂತ್ರಿಗಳು | ಶಿವಮೊಗ್ಗ |
| 2. | ಶ್ರೀ ಗೋವಿಂದ ಕಾರಜೋಳ | ಕೊಪ್ಪಳ |
| 3. | ಶ್ರೀ ಕೆ.ಎಸ್. ಈಶ್ವರಪ್ಪ | ಚಿಕ್ಕಮಗಳೂರು |
| 4. | ಡಾ: ವಿ.ಎಸ್. ಆಚಾರ್ಯ | ಉಡುಪಿ |
| 5. | ಶ್ರೀ ಸಿ.ಎಂ. ಉದಾಸಿ | ಹಾವೇರಿ ಮತ್ತು ರಾಯಚೂರು |
| 6. | ಡಾ: ಮಮ್ತಾಜ್ ಅಲಿಖಾನ್ | ಚಿಕ್ಕಬಳ್ಳಾಪುರ |
| 7. | ಶ್ರೀ ರಾಮಚಂದ್ರಗೌಡ | ಮಂಡ್ಯ |
| 8. | ಶ್ರೀ ಆರ್. ಅಶೋಕ್ | ಬೆಂಗಳೂರು ನಗರ (ಬೆಂಗಳೂರು ದಕ್ಷಿಣ 14 ವಿಧಾನಸಭಾ ಕ್ಷೇತ್ರಗಳು) |
| 9. | ಶ್ರೀ ಎಸ್.ಎ. ರವೀಂದ್ರನಾಥ್ | ದಾವಣಗೆರೆ |
| 10. | ಶ್ರೀ ಜನಾರ್ಧನ ರೆಡ್ಡಿ | ಬಳ್ಳಾರಿ |
| 11. | ಶ್ರೀ ಕಾಗೇರಿ ವಿಶ್ವೇಶ್ವರ ಹೆಗಡೆ | ಉತ್ತರ ಕನ್ನಡ |
| 12. | ಶ್ರೀ ಜಿ. ಕರುಣಾಕರ ರೆಡ್ಡಿ | ಚಿತ್ರದುರ್ಗ |
| 13. | ಶ್ರೀ ಬಿ.ಎನ್. ಬಚ್ಚೇಗೌಡ | ಬೆಂಗಳೂರು ಗ್ರಾಮಾಂತರ |
| 14. | ಶ್ರೀ ಬಸವರಾಜ ಬೊಮ್ಮಾಯಿ | ಬೆಳಗಾಂ |
| 15. | ಶ್ರೀಮತಿ ಶೋಭಾ ಕರಂದ್ಲಾಜೆ | ಮೈಸೂರು |
| 16. | ಶ್ರೀ ಬಿ. ಶ್ರೀರಾಮುಲು | ಗದಗ |
| 17 | ಶ್ರೀ ರೇವೂ ನಾಯಕ ಬಿಳಮಗಿ | ಬೀದರ್ |
| 18 | ಶ್ರೀ ಸುರೇಶ್ ಕುಮಾರ್ ಎಸ್ | ತುಮಕೂರು |
| 19 | ಶ್ರೀ ಜೆ. ಕೃಷ್ಣ ಪಾಲೇಮಾರ್ | ದಕ್ಷಿಣ ಕನ್ನಡ ಮತ್ತು ಕೊಡಗು |
| 20 | ಶ್ರೀ ಅರವಿಂದ ಲಿಂಬಾವಳಿ | ಬಾಗಲಕೋಟೆ ಮತ್ತು ಹಾಸನ |
| 21 | ಶ್ರೀ ಕೃಷ್ಣಯ್ಯ ಶೆಟ್ಟಿ | ಕೋಲಾರ |
| 22 | ಶ್ರೀ ಹೆಚ್. ಹಾಲಪ್ಪ | ಚಾಮರಾಜನಗರ |
| 23 | ಶ್ರೀ ಲಕ್ಷ್ಮಣ್ ಎಸ್. ಸವದಿ | ಗುಲ್ಬರ್ಗಾ |
| 24 | ಶ್ರೀ ಮುರುಗೇಶ್ ನಿರಾಣಿ | ಧಾರವಾಡ |
| 25 | ಶ್ರೀ ಬೆಳ್ಳುಬ್ಬಿ ಸಂಗಪ್ಪ ಕಲ್ಲಪ್ಪ | ಬಿಜಾಪುರ |
| 26. | ಶ್ರೀ ಕಟ್ಟಾ ಸುಬ್ರಮಣ್ಯನಾಯ್ಡು | ಬೆಂಗಳೂರು ನಗರ (ಬೆಂಗಳೂರು ಉತ್ತರ 14 ವಿಧಾನಸಭಾ ಕ್ಷೇತ್ರಗಳು) ಮತ್ತು ರಾಮನಗರ |

**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್.938

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾ–2) ದಿನಾಂಕ 12.03.2008

2 ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/13–1/2007–08 ದಿನಾಂಕ 13.06.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ 31.03.2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯವನ್ನು ನೀಡಲಾಗುವುದೆಂದು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (2)ರಲ್ಲಿರುವ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರವರ ಪತ್ರದಲ್ಲಿ ಬೆಳಗಾಮ್ ಜಿಲ್ಲೆಯ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಎಂ.ಕೆ. ಹುಬ್ಬಳ್ಳಿ. ಈ ಕಾರ್ಖಾನೆಯು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿ ದಿನಾಂಕ 01.04.2008 ರಿಂದ 24.05.2008ರವರೆಗೆ 1,41,022 ಮೆ.ಟನ್ ಕಬ್ಬನ್ನು ನುರಿಸಿದ್ದು ಪ್ರತಿ ಟನ್‌ಗೆ 100/– ರೂ.ಗಳಂತೆ ಸಹಾಯಧನವಾಗಿ 141.02 ಲಕ್ಷ ರೂ.ಗಳನ್ನು ಮತ್ತು 12.03.2008 ರಿಂದ 24.05.2008ರ ವರೆಗೆ 27.482 ಮೆ.ಟನ್ ಕಬ್ಬನ್ನು ಸರಬರಾಜು ಮಾಡಿಕೊಂಡಿದ್ದು ಇದಕ್ಕೆ 6.97 ಲಕ್ಷ ರೂ.ಗಳ ಸಾಗಾಣಿಕೆ ಸಹಾಯಧನವನ್ನು ಮತ್ತು 12.03.2008 ರಿಂದ 05.05..2008ರ ವರೆಗೆ 3,33,560 ಕ್ವಿಂಟಾಲ್ ಸಕ್ಕರೆಯನ್ನು ರಫ್ತು ಮಾಡಿದ್ದು ಇದಕ್ಕೆ 333.46 ಲಕ್ಷ ರೂ.ಗಳನ್ನು ರಫ್ತು ಸಹಾಯಧನವಾಗಿ ಒಟ್ಟಾರೆ 481.55 ಲಕ್ಷ ರೂ.ಗಳನ್ನು ಕಾರ್ಖಾನೆಗೆ ಬಿಡುಗಡೆ ಮಾಡಲು ಜಿಲ್ಲಾಧಿಕಾರಿ, ಬೆಳಗಾಮ್, ಇವರಿಗೆ ಬಿಡುಗಡೆ ಮಾಡಲು ಕಬ್ಬು ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು, ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾ–2) ಬೆಂಗಳೂರು ದಿನಾಂಕ 13ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 2007–08ನೇ ಸಾಲಿನ ಸಕ್ಕರೆ ವರ್ಷದಲ್ಲಿ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂ.ಗಳ ಸಹಾಯಧನ ಮತ್ತು ಪ್ರತಿ ಟನ್ ಕಬ್ಬಿಗೆ ಪ್ರತಿ ಕಿ.ಮೀ.ಗೆ ರೂ. 2/–ರಂತೆ ಸಾಗಾಣಿಕೆ ಸಹಾಯಧನ ಮತ್ತು ರಫ್ತು ಮಾಡಲಾದ ಸಕ್ಕರೆಗೆ ಪ್ರತಿ ಕ್ವಿಂಟಾಲ್‌ಗೆ ರೂ. 100/– ರಂತೆ ಸಕ್ಕರೆ ರಫ್ತು ಸಹಾಯಧನವನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ಎಂ.ಕೆ. ಹುಬ್ಬಳ್ಳಿ, ಬೆಳಗಾಮ್, ಈ ಕಾರ್ಖಾನೆಗೆ ನೀಡುವ ಸಲುವಾಗಿ ಮೊದಲ ಕಂತಾಗಿ ಬೆಳಗಾಮ್ ಜಿಲ್ಲಾಧಿಕಾರಿಯವರಿಗೆ 2.00 ಕೋಟಿ ರೂ.ಗಳನ್ನು (ಎರಡು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ) 106 ಸಹಾಯಧನ" ಅಡಿಯಲ್ಲಿ 25.00 ಕೋಟಿ ರೂ.ಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಸದರಿ 2.00 ಕೋಟಿ ರೂ.ಗಳನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಗೆ ಸಹಾಯಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 12.03.2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಬೆಳಗಾಮ್ ಜಿಲ್ಲಾಧಿಕಾರಿಯವರ ಮೂಲಕ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದು. ಕಾರ್ಖಾನೆಯ ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.942

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ:** ಆರ್.ಐ.ಡಿ.ಎಫ್–13ರ ಕಾಮಗಾರಿಗಳ ಘಟಕ ವೆಚ್ಚಕ್ಕೆ ಸಂಬಂಧಿಸಿದಂತೆ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಇಡಿ 158 ಯೋಸಕ 2007 ದಿ: 29.01.2008

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ,ಉಲ್ಲೇಖಿತ ಸರ್ಕಾರಿ ಆದೇಶದ ಭಾಗದಲ್ಲಿನ ಷರತ್ತಿನ ಭಾಗ (ಓ) ಆದ ನಂತರ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

(ಓ) ಆರ್.ಐ.ಡಿ.ಎಫ್–13ರ ರಡಿ ಕೊಠಡಿಗಳನ್ನು ನಿರ್ಮಿಸುವಾಗ ಘಟಕ ವೆಚ್ಚವನ್ನು ಈ ಕೆಳಕಂಡಂತೆ ಹಂಚಿಕೆ ಮಾಡಲಾಗಿದೆ. ಅದರಂತೆ ಕೊಠಡಿಗಳನ್ನು ನಿರ್ಮಿಸಲು ಸೂಚಿಸಿದೆ.

| ಕ್ರ. ಸಂ. | ಕೊಠಡಿ ಸಂಖ್ಯೆ | ಸಿವಿಲ್ ಕಾಮಗಾರಿಗೆ | ಆಯಾ ಕೊಠಡಿಗಳಿಗೆ ಪೀಠೋಪಕರಣ ಒದಗಿಸಲು | ಒಟ್ಟು ಮೊತ್ತ |
|---|---|---|---|---|
| 1. | ಒಂದು ಕೊಠಡಿ | 4.50 | 0.50 | 5.00 |
| 2. | ಎರಡು ಕೊಠಡಿ | 9.00 | 1.00 | 10.00 |
| 3. | ಮೂರು ಕೊಠಡಿ | 13.50 | 1.50 | 15.00 |
| 4. | ನಾಲ್ಕು ಕೊಠಡಿ | 18.00 | 2.00 | 20.00 |
| 5. | ಐದು ಕೊಠಡಿ | 22.50 | 2.50 | 25.00 |

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.945

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಸಂಖ್ಯೆ ಸಿಆಸುಇ 368 ಎಸ್ಇಎನ್ 2006 ಬೆಂಗಳೂರು ದಿನಾಂಕ: 28ನೇ ಮೇ 2008**

**ತಿದ್ದೋಲೆ**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 368 ಎಸ್ಇಎನ್ 2006 ದಿನಾಂಕ: 14.05.2008ರ ಆದೇಶ ಭಾಗದ ಮೂರನೇ ಸಾಲಿನಲ್ಲಿ ನಮೂದಿಸಿರುವ ದಿನಾಂಕವನ್ನು "26–06–2006" ಎಂದು ದಿನಾಂಕ: 14.05.2008 ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 939

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3)

**HEALTH & FAMILY WELFARE SECRETARIAT**

**Sub:** Contracting-in Specialists services to Government health facilities – reg.

**Read :**
1 Proceedings of the 1st meeting of the Programme Steering Committee held on 2.6.2007.
2 Proceedings of the 2nd meeting of the Programme Steering Committee held on 9.10.2007.
3 Proceedings of the 4th meeting of the Programme Steering Committee held on 7.3.2008.

**Preamble:**

A proposal was placed before the Programme Steering Committee in its 1st meeting held on 2.6.2007 to contracting-in Specialists who can render services in the government health facilities wherever posts of Specialists are vacant. The Specialists services would be primarily aimed at improving the maternal and child health services, specialist's serives of a general nature like medicine, surgery and emergency services, etc. This proposal was developed in consultation with the World Bank and a Public-Private Partnership model was accordingly designed. The Programme Steering Committee approved the same.

The Programme Steering Committee in its 2nd meeting held on 9.10.2007 approved constitution of a Committee that under the Chairmanship of the Project Administrator that could be decided on the renumeration and fee structure required for paying the Specialists who are to be drawn from the private

sector. The Committee consisting of the Project Administrator as the Chairman, Deputy Director (PPP) as Member Secretary, Director, Health and Family Welfare Services, Project Director (RCH), District Surgeons, and Physician from field offices as its Members vide O.M. No. HFW/KHSDRP/Sect-43/07-08, dt. 22.11.2007. The Chairperson also suggested that serives of Physicians, Surgeons, Paediatricians, Gynaecologists and Anaesthetists are most vital to a Government hospital and hence their services need to be contracted in a priority basis.

The Terms of Reference for contracting-out of general Specialists, Specialists services for MCH and Specialists services for surgical Procedure and Medical emergencies were developed in consultation with the World Bank and approval obtained. The Committee constituted for fixing remuneration finalized a remuneration pattern for the Specialists services along with the retention fee of Rs. 5,000/- per month for availability at all times. This proposal was placed in the 4th meeting of the Programme Steering Committee held on 7.3.2008 and it accorded its approval to the same. The Committee approved the contracting-in of Specialists services to Government health facilities that have vacant posts of Specialists or in some cases based on actual requirements of specialists based on health challenge in those areas.

Hence, the following order.

**Govt. Order No. HFW/KHSDRP/Sect-43/07-08, Bangalore dated 2nd April 2008**

Under the circumstances mentioned in the preamble Government are pleased to accord approval for contracting-in Specialists to Government health facilities that have vacant posts of Specialists or in some cases based on actual requirements of specialists based on health challenge in particular areas. Government are also pleased to approval actual fee structure and remuneration to be paid to the specialists to be contracted in as per following rates.

1. Materail and Child Health:- A retention fee for Rs. 5000/- on montly basis for availability at all times, incentive for conducting LSCS in first referral hospitals of Rs. 1500/- for Ghynaecologists, Rs. 1000/- for Anaesthetists, for Rs. 500/- for paediatricians.
2. General Specialists:- Rs. 5000/- as retention fee on a monthly basis for availability at all times, Rs. 1000/- per day for OPD, for at least 2 days of OPD in a week.

Apart from this, the following rates per visit and per surgery are hereby approved.

| **Sl. No.** | **Medical Emergencies** | **Rate per visit (in Rs.)** | **Maxium rate per day (in Rs.)** |
|---|---|---|---|
| 1. | Myocardial Infarction | 100 | 500 |
| 2. | Cardio Vascular Accidents | 100 | 500 |
| 3. | Cerebro Vascular Accidents | 100 | 500 |
| 4. | Acute Respiratory Infection | 100 | 500 |
| 5. | Foreign Bodies in Airo Digestive Tract | 100 | 500 |
| 6. | Chest Injuries | 100 | 500 |
| 7. | Status Asthmaticus | 100 | 500 |
| 8. | Acute Renal Failure | 100 | 500 |
| 9. | Coma (Shock) | 100 | 500 |
| 10. | Acute Congestive Glaucoma (Eye) | 100 | 500 |
| 11. | Acute Poisoning | 100 | 500 |
| 12. | Snake Bite | 100 | 500 |

| **Sl. No.** | **Surgical Emergencies** | **Rate Per Surgery (in Rs.)** |
|---|---|---|
| 1. | Burns Injuries more than 30% | 1000.00 |
| 2. | Acute Appendicitis | 1500.00 |
| 3. | Perforations (Abdominal) | 3000.00 |
| 4. | Colic Attacks (pain leading to laparotomy) | 3000.00 |
| 5. | Bleeding Haemmorhoids | 500.00 |

| | | |
|---|---|---|
| 6. | Foreign Bodies in the Eye | 300.00 |
| 7. | Lens induced Glaucoma (Eye) | 1500.00 |
| 8. | Tracheostomy | 1000.00 |
| 9. | Supra Public cystotomy | 1000.00 |
| 10. | Acute Abscess | 300.00 |
| 11. | Acute Cellulites due to snake bite | 500.00 |
| 12. | Acute Retention of Urine | 500.00 |
| 13. | Acute Management of shocks | 500.00 |
| | **Emergency Obstetric & Gynaecological Conditions** | |
| 1. | Rupture Uterus | 2000.00 |
| 2. | Tubal Pregnancy | 2000.00 |
| 3. | Accidental Haemorrhage | 1000.00 |
| 4. | Uterine Bleeding | 2000.00 |
| 5. | Uterine Perforation | 2000.00 |
| 6. | Injury-Genito Urinary Tract | 2000.00 |
| 7. | Foreign body in Genito Urinary Tract | 500.00 |
| 8. | Abortions | 300.00 |

| Sl. No. | Orthopaedic Surgeries | Rate as per Surgery (in Rs.) |
|---|---|---|
| 1. | Dislocation of joints<br>a. Closed Reduction<br>b. Open Reduction | <br>500<br>4000.00 |
| 2. | Haemorthorosis | 500.00 |
| 3. | Ligament Tear | 2500.00 |
| 4. | Fracture neck & Femor | 4000.00 |
| 5. | Fracture of Long Bones – close reduction | 500.00 |
| | Open reduction | 3000.00 |
| 6. | Tapping with inter costal drainage | 500.00 |
| 7. | Intubations to remove foreign body in respiratory tract | 1000.00 |
| 8. | Head Injury management | 1000.00 |
| 9. | Fracture rib Haemothorax | 500.00 |

Government are also pleased to authorize the District Level Committee headed by the Deputy Commissioners for shortlisting a panel of specialists to be contracted in wherever specialists' posts are vacant by giving wide publicity and transparent process.

For any existing vacancy of a particular specialisation a panel of 2 doctors can be shortlisted and after assessment of the time that any specialist can devote for this, chose one of them for retention and contracting in. Approval for such contracting in can be given by the District Level Committee.

In case no vacancy of a particular specialisation exists, but the health challenge in that area requires that specialists of particular disciplines be contracted-in then the District Level Committee can recommend to the Project Administrator that such contracting in be allowed.

Project Administrator, KHSDRP will examine such requests of District Level Committee and decide whether such contracting in can be allowed for that health challenge even without vacancy of such Specialisation / without posts for such specialisation existing in the Government facility.

By order and in the Name of the President of India,

**SUSHAMA GODBOLE**

PR. 618

Deputy Secretary to Government,
KHSDRP
Department of Health & Family Welfare